೨೮೦

ಪ್ರಚಾರ ಪುಸ್ತಕ ಮಾಲೆ

# ಡಾ. ಆ.ನೇ. ಉಪಾಧ್ಯೆ

ಡಾ. ಪ್ರೀತಿ ಶುಭಚಂದ್ರ



ಪ್ರಚಾರ ಪುಸ್ತಕ ಮಾಲೆ-೨೮೦

# ಡಾ. ಆ.ನೇ.ಉಪಾಧ್ಯೆ

ಡಾ. ಪ್ರೀತಿ ಶುಭಚಂದ್ರ




೨೦೦೭

ಮೊದಲನೆಯ ಮುದ್ರಣ : ೨೦೦೭

೫೦೦೦ ಪ್ರತಿಗಳು



ಬೆಲೆ : ರೂ.೫.೦೦

**ಪ್ರಕಾಶಕರು**

ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು – ೬.

**ಮುದ್ರಕರು**

ಕಮಲ ಪ್ರಕಾಶನ, ವಿಜಯನಗರ, ಮೈಸೂರು - ೫೭೦ ೦೧೭.

# ಮುನ್ನುಡಿ

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಸೆನೆಟ್ ಸಭೆಯಲ್ಲಿ ಹೇಳಿದ ಮಾತುಗಳನ್ನು ಈಗ ನೆನಪಿಸಿಕೊಳ್ಳಬಹುದು. "ಕಾರಣಾಂತರಗಳಿಂದ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಲು ಅಶಕ್ತರಾದ ಜನಸಾಮಾನ್ಯರಿಗೆ ವಿಶ್ವವಿದ್ಯೆಯ ಪರಿಚಯ ಮಾಡಿಕೊಡಲು ನಮ್ಮ ವಿಶ್ವವಿದ್ಯಾನಿಲಯ ಶ್ರಮಿಸಬೇಕು. ಈ ಕಾರ್ಯವು ಪ್ರಚಾರೋಪನ್ಯಾಸ ಮತ್ತು ಪ್ರಕಟಣೆಗಳ ಮೂಲಕ ನಡೆಯಬೇಕಾಗಿದೆ. ಅತ್ಯಂತ ಪ್ರಯೋಜನಕಾರಿಯಾದ ಈ ಮಹತ್ಕಾರ್ಯವನ್ನು ವಿಶ್ವವಿದ್ಯಾನಿಲಯವು ಬೇಗನೆ ಕಾರ್ಯರೂಪಕ್ಕೆ ತರುವುದೆಂದು ನಂಬಿದ್ದೇನೆ."

೧೯೩೩ರಲ್ಲಿ ಸ್ಥಾಪನೆಯಾದ ಅಧ್ಯಾಪಕರ ಸಂಘ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಪ್ರಾರಂಭಿಸಿತು. ಈ ಪ್ರಯೋಗದ ಖ್ಯಾತಿ ವಿದೇಶಗಳಿಗೂ ಹಬ್ಬಿತು. "ನಹಿ ಜ್ಞಾನೇನ ಸದೃಶಂ" ಎಂಬ ಮೈಸೂರು ವಿಶ್ವವಿದ್ಯಾನಿಲಯದ ಆದರ್ಶದ ಕಾರ್ಯಾಚರಣೆಗಳಲ್ಲಿ ಪ್ರಚಾರೋಪನ್ಯಾಸ ಮಾಲೆಯೂ ಒಂದು. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ತಿಳಿವಳಿಕೆ ಪಡೆಯಲು ಅನುವಾಗುವಂತೆ ಪ್ರಚಾರ ಪುಸ್ತಕಮಾಲೆ ಅಸ್ತಿತ್ವಕ್ಕೆ ಬಂದು, ಅದು ಅತ್ಯಂತ ಜನಪ್ರಿಯವಾಗಿದೆ.

ಸುವರ್ಣ ಪ್ರಚಾರ ಪುಸ್ತಕಮಾಲೆಯಡಿಯಲ್ಲಿ ಒಂದು ದಶಕದ ನಂತರ. ಈಗ ಹೊಸದಾಗಿ ೫೦ ಶೀರ್ಷಿಕೆಗಳು ಪ್ರಕಟವಾಗುತ್ತಿವೆ. ಇವುಗಳಲ್ಲಿ ಸಾಹಿತ್ಯ, ಅರ್ಥಶಾಸ್ತ್ರ, ವೈದ್ಯ ವಿಜ್ಞಾನ, ಪ್ರಾಣಿ ವಿಜ್ಞಾನ ಮುಂತಾದ ವಿಷಯಗಳನ್ನು ಕುರಿತಂತೆ ಅತ್ಯಂತ ಉಪಯುಕ್ತ ಪುಸ್ತಿಕೆಗಳು ಸೇರಿದ್ದು, ಇವು ಕೂಡ ಎಲ್ಲ ಪುಸ್ತಕ ಪ್ರೇಮಿಗಳ ಮತ್ತು ಜ್ಞಾನಾಸಕ್ತರ ಮೆಚ್ಚುಗೆ ಪಡೆಯುತ್ತವೆಂದು ಆಶಿಸುತ್ತೇನೆ.

ಜೆ. ಶಶಿಧರ ಪ್ರಸಾದ್
ಕುಲಪತಿ

# ಪ್ರಕಾಶಕರ ಮಾತು

೧೯೩೩ರಲ್ಲಿ ಸ್ಥಾಪನೆಯಾದ ಪ್ರಸಾರಾಂಗ ಜ್ಞಾನಪ್ರಸಾರದ ಕಾರ್ಯದಲ್ಲಿ ನೀಡಿದ ಕೊಡುಗೆ ಮಹತ್ತ್ವದ್ದು. ಜನಸಾಮಾನ್ಯರಿಗೆ ವಿಶ್ವವಿದ್ಯೆಯ ಪರಿಚಯ ಆಗಬೇಕೆಂಬ ಆಶಯವನ್ನು ಗಮನದಲ್ಲಿಟ್ಟುಕೊಂಡು ಮೈಸೂರು ವಿಶ್ವವಿದ್ಯಾನಿಲಯದ ಈ ಸಂಸ್ಥೆ ಕೆಲಸ ಮಾಡುತ್ತಿದೆ. ೧೯೩೩ರಲ್ಲೇ ಅಧ್ಯಾಪಕರ ಸಂಘ ಪ್ರಾರಂಭಿಸಿದ ಪ್ರಚಾರೋಪನ್ಯಾಸ ಕಾರ್ಯಕ್ರಮ ಉತ್ತಮ ಪ್ರಯೋಗವೆಂಬ ಖ್ಯಾತಿಯನ್ನು ಗಳಿಸಿದೆ. ಪ್ರಚಾರ ಪುಸ್ತಕಮಾಲೆಯಲ್ಲಿ ಪ್ರಕಟವಾಗಿರುವ ನೂರಾರು ಪುಸ್ತಕಗಳಿಂದ ಸಾಮಾನ್ಯ ಜನರಿಗೂ ಜ್ಞಾನದ ವಿವಿಧ ಶಾಖೆಗಳ ಪರಿಚಯವಾದಂತಾಯಿತು. ರಾಷ್ಟ್ರಕವಿ ಕುವೆಂಪು ಅವರು ಹೇಳಿದಂತೆ "ಈ ಮೂಲಕ ವಿಶ್ವವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆ ಮೂಲೆಗೆಲ್ಲ ಹರಿದು, ಸಮಷ್ಟಿ ಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ".

ಕಿರು ಹೊತ್ತಿಗೆಗಳ ಮೂಲಕ ಒಂದು ವಿಷಯವನ್ನು ಹಿತಮಿತವಾಗಿ ಪರಿಚಯಿಸುವ ಕೆಲಸವನ್ನು ಅನೇಕರು ಕೈಗೊಂಡಿದ್ದಾರೆ. ಆದರೆ, ಪ್ರಸಾರಾಂಗದ ಪ್ರಚಾರ ಪುಸ್ತಕ ಮಾಲೆ ಅನೇಕ ದಶಕಗಳಿಂದ ಇದನ್ನು ನಿರ್ವಹಿಸಿದ ರೀತಿ ಪ್ರಶಂಸಾರ್ಹ ವಾದುದು. ಈ ಕಾರ್ಯಕ್ರಮದಲ್ಲಿ ನಾಡಿನ ಅತ್ಯಂತ ಶ್ರೇಷ್ಠ

ಸಾಹಿತಿಗಳು, ಚಿಂತಕರು, ವಿಜ್ಞಾನಿಗಳು ಪಾಲುದಾರರಾಗಿದ್ದರು. ಇದರ ವೈಶಿಷ್ಟ್ಯವನ್ನು ಮನಗಂಡ ಕುಲಪತಿಗಳು ಹಲವರು ಪ್ರಚಾರ ಪುಸ್ತಕ ಮಾಲೆ ಮುಂದುವರಿಯಲು ಕಾರಣಕರ್ತ ರಾಗಿದ್ದಾರೆ. ಈಗ ೫೦ ಉಪನ್ಯಾಸಗಳನ್ನು ಏರ್ಪಡಿಸಿ, ಈ ಸುವರ್ಣ ಪ್ರಚಾರ ಪುಸ್ತಕಮಾಲೆಯನ್ನು ಹೊರತರಲು ನೆರವಾಗಿ ಮಾನ್ಯ ಕುಲಪತಿಗಳಾದ ಡಾ. ಶಶಿಧರ ಪ್ರಸಾದ್ ಅವರು ನಮ್ಮ ಕೃತಜ್ಞತೆಗೆ ಅರ್ಹರಾಗಿದ್ದಾರೆ. ಈ ಕಾರ್ಯಕ್ರಮದಲ್ಲಿ ನೆರವಾದ ಎಲ್ಲರಿಗೂ ನಮ್ಮ ಧನ್ಯವಾದಗಳು. ಈ ಪುಸ್ತಿಕೆಯನ್ನು ಬರೆದುಕೊಟ್ಟ ಡಾ. ಪ್ರೀತಿ ಶುಭಚಂದ್ರ ಅವರಿಗೆ ಕೃತಜ್ಞನಾಗಿದ್ದೇನೆ.

ಆರ್ವಿಯಸ್ ಸುಂದರಂ
ನಿರ್ದೇಶಕ, ಪ್ರಸಾರಾಂಗ

# ಅರಿಕೆ

ಅಂತರ್‌ರಾಷ್ಟ್ರೀಯ ಪ್ರಾಚ್ಯವಿದ್ಯಾ ವಿದ್ವಾಂಸರಾದ ಡಾ.ಆ.ನೇ. ಉಪಾಧ್ಯೆಯವರ ಬಗೆಗೆ ಅಧ್ಯಯನ ಪೂರ್ಣ ಬರಹವನ್ನು ಸಿದ್ಧಪಡಿಸಬೇಕೆಂಬುದು ನನ್ನ ಬಹುದಿನದ ಆಸೆಯಾಗಿತ್ತು. ಉಪಾಧ್ಯೆಯವರ ಶಿಷ್ಯರಾದ ಶ್ರೀ ಶುಭಚಂದ್ರರಿಂದ ಉಪಾಧ್ಯೆಯವರ ವಿದ್ವತ್ಪೂರ್ಣ ವ್ಯಕ್ತಿತ್ವದ ಮಾನವೀಯ ಸ್ಪಂದನಗಳ ಬೋಧೆಯ ಲಾಭ ನನಗಾಗುತ್ತಿತ್ತು. ಇದರಲ್ಲಿ ಪಾಲ್ಗೊಂಡ ನನ್ನ ಮಗ ಚಿ.ಮಿಲಿಂದನ ಅಪೇಕ್ಷೆಯ ಮೇರೆಗೆ ಇದನ್ನು ದಾಖಲಿಸ ಬೇಕಾದ ಸಮಯಾವಕಾಶಕ್ಕಾಗಿ ನಾನು ಕಾಯುತ್ತಿದ್ದೆ.

ಕುಲಪತಿಗಳಾದ ಪ್ರೊ. ಜೆ.ಶಶಿಧರ ಪ್ರಸಾದರು ಪುನಃ ಚಾಲನೆಗೊಳಿಸಿದ ಪ್ರಚಾರೋಪನ್ಯಾಸ ಮಾಲಿಕೆಯಲ್ಲಿ ಡಾ. ಆ.ನೇ.ಉಪಾಧ್ಯೆಯವರ ಬಗೆಗೆ ಉಪನ್ಯಾಸ ನೀಡಲು ಅವಕಾಶವಿತ್ತವರು - ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಆರ್ವಿಯಸ್ ಸುಂದರಂ ಅವರು. ಡಾ. ಉಪಾಧ್ಯೆಯವರು ಮೈಸೂರು ವಿಶ್ವವಿದ್ಯಾಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ವಿಭಾಗಕ್ಕೆ ಸ್ಥಾಪಕ ಮುಖ್ಯಸ್ಥರಾಗಿ ಸೇವೆ ಸಲ್ಲಿಸಲು ಕಾರಣರಾದವರು- ಪ್ರೊ. ದೇಜಗೌ ಅವರು. ಇವರೆಲ್ಲರಿಗೂ ನನ್ನ ಕೃತಜ್ಞತಾ ವಂದನೆಗಳನ್ನು ಸಲ್ಲಿಸುತ್ತೇನೆ.

**ಡಾ. ಪ್ರೀತಿ ಶುಭಚಂದ್ರ**
ರೀಡರ್
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

# ಡಾ. ಆ.ನೇ. ಉಪಾಧ್ಯೆ

ಆ. ನೇ. ಉಪಾಧ್ಯೆಯವರನ್ನು ಕುರಿತು ಮಲೆನಾಡಿನ ಮೇರು ಕವಿ, ರಾಷ್ಟ್ರಕವಿ ಕುವೆಂಪುರವರು ಆಡಿದ ಮಾತಿದು :

"ಡಾ. ಉಪಾಧ್ಯೆ ಅವರು ವಿದ್ವತ್ತಿನ ಕ್ಷೇತ್ರದಲ್ಲಿ ಸಂಪಾದನ, ಸಂಶೋಧನ, ಪಾಂಡಿತ್ಯ - ಈ ಮೂರು ವಿಷಯಗಳಲ್ಲಿ ಸಮುದ್ರ ಪ್ರಾಯರು. ಆ ಸಮುದ್ರದಲ್ಲಿ ಮುತ್ತು ರತ್ನಗಳಿಗಾಗಿ ಮುಳುಗಿದವರಿದ್ದಾರೆ. ಸಮುದ್ರದ ವಿಸ್ತಾರವನ್ನು ಕಾಣಲು ಪರ್ಯಟನ ಮಾಡಿದವರಿದ್ದಾರೆ. ಆದರೆ ನಾನು ಅದರ ಮಳಲು ದಂಡೆಯ ಮೇಲೆ ನಿಂತು, ಆ ಸಮುದ್ರದ ವಿಸ್ತಾರವನ್ನೂ ತರಂಗಗಳ ರಮಣೀಯತೆಯನ್ನೂ ನೋಡಿ, ಕೇಳಿ ಆನಂದಿಸಬಲ್ಲೆನೇ ಹೊರತು ಅದಕ್ಕೆ ಪ್ರವೇಶವಾಗಲಿ, ಅದನ್ನು ಪರ್ಯಟನ ಮಾಡುವುದಾಗಲಿ ಸಾಧ್ಯವಿಲ್ಲದ ಮಾತು...... ನಮಗೆ ಈ ಪರ್ವತದ ಆರೋಹಣ ಮಾಡಲು ಸಾಧ್ಯವಿಲ್ಲ. ದೂರದಿಂದಲೇ ಪ್ರದಕ್ಷಿಣೆ ಮಾಡಬಹುದು......"

ಕುವೆಂಪುರವರ ಈ ನುಡಿಗಳು ಉಪಾಧ್ಯೆಯವರ ವ್ಯಕ್ತಿತ್ವದ ಆಧ್ಯಾತ್ಮಿಕ ಸತ್ವವನ್ನು ಹಿಡಿದಿಟ್ಟಿವೆ. ಪ್ರೊ. ಡಿ.ಎಲ್. ಎನ್. ಅವರು ಉಪಾಧ್ಯೆಯವರನ್ನು ಒಮ್ಮೆ ಒಂದು ಸಭೆಗೆ ಹೀಗೆ ಪರಿಚಯಿಸಿದರು :

"ಆ. ನೇ. ಉಪಾಧ್ಯೆಯವರು ಸಾಹಿತ್ಯ ಪ್ರಪಂಚದಲ್ಲಿ ತಮ್ಮ ಹೆಸರಿನ ಮೊದಲ ಎರಡು ಅಕ್ಷರಗಳೇ ಹೇಳುವಂತೆ ಆನೆ ಇದ್ದಂತೆ. ಸಾಮಾನ್ಯ ಆನೆಯಲ್ಲ ದಿಗ್ಗಜ." ತನ್ನಲ್ಲಿರುವ ಅಜ್ಞಾನವೆಷ್ಟೆಂಬುದರ ಅರಿವನ್ನು ಪಡೆಯುತ್ತಾ ಹೋಗುವುದೇ ಜ್ಞಾನಿಯ ಲಕ್ಷಣ ಎಂದು ಸಾಕ್ರಟಿಸ್ ಹೇಳಿದ್ದಾನೆ. ಅವನ ಕಾಲದಲ್ಲಿ ಜ್ಞಾನವನ್ನು ಸೃಷ್ಟಿ ಮಾಡಿ ಕೊಡುವವರು ತಾವು ಎಂಬ ಜ್ಞಾನಮದವನ್ನು ಹೊಂದಿದ್ದ ಸೋಫಿಸ್ಟರ ಸೊಕ್ಕನ್ನು ಮುರಿಯುವುದೂ ಅವನ ಉದ್ದೇಶವಾಗಿತ್ತು. ಪಾಂಡಿತ್ಯದ ಆನೆ ಎಂದು ಉದಾರತೆಯಿಂದ ಪರಿಚಯ ಮಾಡಿಕೊಟ್ಟ ಪ್ರೊ. ಡಿ. ಎಲ್. ಎನ್. ಮಾತಿಗೆ ಉಪಾಧ್ಯೆ ವಿನಯಪೂರ್ವಕವಾಗಿ ಹೇಳಿದರು : "ನಾನು 'ಆನೆ' ಅಲ್ಲ, 'ಅಣು'. ನನ್ನ ಹೆಸರಿನ ಮೊದಲ ಅಕ್ಷರಗಳನ್ನು ಇಂಗ್ಲಿಷಿನಲ್ಲಿ ಬರೆದರೆ ಆ ಸಾಗರದಲ್ಲಿ ನಾನೊಂದು 'ಅಣು' ಮಾತ್ರ". ಅವರ ಈ ವಿನಯ ಎಂದೂ ಇತರರನ್ನು ಓಲೈಸಿಕೊಳ್ಳುವಲ್ಲಿ ವಿನಿಯೋಗವಾಗಲಿಲ್ಲ. ಇನ್ನೊಂದು ಸಭೆಯಲ್ಲಿ ಒಮ್ಮೆ ಉಪಾಧ್ಯೆ ವಿನಯದಿಂದಲೇ ನುಡಿದರು : "ಮಠಗಳು ತಮ್ಮ ಪ್ರತಿಷ್ಠೆ ಹೆಚ್ಚಿಸಿಕೊಳ್ಳಲು ಆನೆಗಳನ್ನು ಸಾಕುತ್ತವೆ. ಆನೆ-ಅದೊಂದು ತಿರ್ಯಕ್ ಪ್ರಾಣಿ, ಅದರಿಂದೇನು ಮಠದ ಪ್ರತಿಷ್ಠೆ ಬೆಳೆದೀತು ? ಸಾಕುವುದಿದ್ದರೆ ನನ್ನಂಥ ಪಾಂಡಿತ್ಯದ ಆನೆಯನ್ನು ಬೆಳೆಸಿ."

೧೯ನೇ ಶತಮಾನದಲ್ಲಾದ ಭಾರತೀಯ ಬೌದ್ಧಿಕ ಪರಂಪರೆಯ ರಿನೈಸಾನ್ಸ್, ಪುನರುಜ್ಜೀವನಕ್ಕೆ ಸ್ಪಷ್ಟವಾದ ರಾಜಕೀಯಾತ್ಮಕ ಉದ್ದೇಶಗಳಿದ್ದವು. ೧೮ನೇ ಶತಮಾನದ ಮಧ್ಯಭಾಗದ ಹೊತ್ತಿಗಾಗಲೇ ರಾಜಕೀಯ ಬದಲಾವಣೆ ಆಗತೊಡಗಿತ್ತು. ಸಂಸ್ಥಾನಿಕ ರಾಜರು, ಭೂಮಾಲಿಕ ಶ್ರೀಮಂತರು ಪೋಷಕರಾಗಿದ್ದ ಸಂಸ್ಕೃತ ಪಾಠಶಾಲೆ, ಮದರಸಾ ಹಾಗೂ [illegible]ಲಿಮಠಗಳು ಕ್ಷೀಣದೆಸೆಗೆ ಇಳಿದವು. ೧೯ನೇ

ಶತಮಾನದ ಮೊದಲಲ್ಲಿ ನಿಧನನಾದ ಜಗನ್ನಾಥ ತಾರ್ಕ ಪಂಚಾನ-ಕುರಿತು the last giant of traditional Hindu learning ಎನ್ನಲಾಗಿದೆ. ಸ್ಥಳೀಯ ರಾಜರ ಬದಲಾಗಿ ನೇರವಾಗಿ ಬ್ರಿಟಿಷ್ ಸರ್ಕಾರವೇ ಸಂಸ್ಕೃತ ಕಾಲೇಜನ್ನು ಸ್ಥಾಪಿಸಿತು. ಇಂಗ್ಲಿಷ್ ಕೂಡ ಶಿಕ್ಷಣದಲ್ಲಿ ಜ್ಞಾನದ ಮಾಧ್ಯಮವಾಗಿ ಬಳಕೆಯಾಗತೊಡಗಿತು. ಸಾಂಪ್ರದಾಯಿಕ ಕಲಿಕೆಯ ಮಿತಿಗಳು ಆ ಸಂದರ್ಭದಲ್ಲಿ ಗೋಚರಿಸಲಾರಂಭಿಸಿದವು. ನಮ್ಮ ಹಿರಿಯರು ಎಲ್ಲಾ ಜ್ಞಾನವನ್ನು ಹೀರಿ ಹೊಂದಿದವರೆಂಬ ಅಂಧಾಭಿಮಾನವಿತ್ತು. ಹಳೆಯ ಬರವಣಿಗೆಯನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದೇ ವಿದ್ಯೆಯ ಗುರಿಯಾಗಿದ್ದು, ಸ್ವತಂತ್ರ ಸಂಶೋಧನೆಗೆ ಅವಕಾಶವಿರದಿರುವುದು ಗಮನಕ್ಕೆ ಬಂತು. A land mark in the cultural History of India- ಎನ್ನಲಾದ Asiatic Society ೧೭೮೪ರಲ್ಲಿ ಸ್ಥಾಪಿತವಾಯ್ತು. ಆದರೆ ೧೮೨೯ ರವರೆಗೆ ಭಾರತೀಯರ ಹೆಸರು ೩೦ ಜನರಿದ್ದ ಸದಸ್ಯರ ಪಟ್ಟಿಯಲ್ಲಿ ಸೇರ್ಪಡೆಯಾಗಲಿಲ್ಲ. ಪೌರ್ವಾತ್ಯ ಸಾಹಿತ್ಯ, ಚರಿತ್ರೆ, ತತ್ತ್ವಶಾಸ್ತ್ರ, ಕಲೆಗಳ ಅಧ್ಯಯನದ ಅವಶ್ಯಕತೆಯು 'a high political obligation' ಆದುದಾಗಿ ಐರೋಪ್ಯರಿಗೆ ಕಂಡು ಬಂತು. ೧೮ನೇ ಶತಮಾನದಲ್ಲಿ ಇಂಗ್ಲಿಷ್ ಪ್ರಚಾರ ಮಾಡಿದ ಚಾರ್ಲ್ಸ್ ಗ್ರ್ಯಾಂಟ್‌ನ ಎದುರು ಆದರ್ಶವಾಗಿದ್ದದ್ದು- ರೋಮನರ ಆಕ್ರಮಣ. ತಾವು ಆಕ್ರಮಿಸಿದ ಆ ರಾಷ್ಟ್ರಗಳ ಜನರನ್ನು ರೋಮನ್ನರು ನಾಗರಿಕರನ್ನಾಗಿಸಿ ಸುಧಾರಿಸಿದಂತೆ ಇಂಗ್ಲಿಷ್ ಭಾಷೆ, ಚಿಂತನೆ, ಧರ್ಮ, ಜ್ಞಾನಗಳನ್ನು ಏಷ್ಯಾವಲಯಗಳಲ್ಲಿ ಬಿತ್ತಬೇಕೆಂಬ ಆಶಯ ಆತನದು. ಸಾಹಿತ್ಯ, ವಿಜ್ಞಾನಗಳ ಕಲಿಕೆಯಲ್ಲಿ ಭಾರತೀಯರು ಹಿಂದುಳಿದಿರುವುದು ಬ್ರಿಟಿಷರ ರಾಷ್ಟ್ರೀಯ ವ್ಯಕ್ತಿತ್ವಕ್ಕೆ ಬರಬಹುದಾದ ಕಳಂಕ ಎಂದು

ಲಾರ್ಡ್ ಮಿಂಟೋ ಭಾವಿಸಿದ. ಹಾಗಾಗಿ ಹಳೆಯ ಗ್ರಂಥಗಳನ್ನು ಓದಿ, ಅರ್ಥಮಾಡಿಕೊಂಡು ವೈಚಾರಿಕ ಪರಂಪರೆಯನ್ನು ಮುಂದುವರಿಸಬಲ್ಲವರನ್ನು ತಯಾರುಮಾಡುವುದೂ ಆಧುನಿಕ ಶಿಕ್ಷಣದ ಗುರಿಯಾಯ್ತು. ಆದರೆ ರಾಜಾರಾಮ ಮೋಹನರಾಯರಂಥವರು Oriental studiesಗೆ ಬದಲಾಗಿ ವಿಜ್ಞಾನ ಕಲಿಕೆಯೇ ವಿದ್ಯಾಭ್ಯಾಸದ ಆದ್ಯ ಅವಶ್ಯಕತೆಯಾಗಿರಬೇಕೆಂದರು. ಹಿಂದೂ ಕಾಲೇಜಿನ ಪೋಷಕರು ತಮ್ಮ ಮಕ್ಕಳಿಗೆ ಮತ ಸಂಬಂಧೀ ವಿಷಯಗಳಿಗೆ ಹೊರತಾದ ಸೆಕ್ಯುಲರ್ ಶಿಕ್ಷಣ ಬೇಕೆಂಬ ಮನವಿ ಸಲ್ಲಿಸಿದ್ದರು. ಲಾರ್ಡ್ ಎಲೆನ್‌ಬರೋನಂಥ ಅಧಿಕಾರಿ ಸೆಕ್ಯೂಲರ್ ಶಿಕ್ಷಣ ಕುರಿತಾದ ಬೇಡಿಕೆಯ ಹಿಂದೆ ವ್ಯಾವಹಾರಿಕ ಲಾಭದ ಉದ್ದೇಶವನ್ನು ಗ್ರಹಿಸಿ ಹೀಗೆ ಹೇಳಿದ- 'English means rupees'. ೧೮೫೩ರಲ್ಲಿ ಹೊರಬಂದ ಪಾರ್ಲಿಮೆಂಟರಿ ಕಮಿಟಿಯ ಅಭಿಪ್ರಾಯವು ಸಂಸ್ಕೃತ ಹಾಗೂ ಅರೇಬಿಕ್ ಸಾಹಿತ್ಯದ ಪ್ರತಿಷ್ಠೆಯನ್ನು ಉಳಿಸಿ ಬೆಳೆಸಿಕೊಳ್ಳುವ ನಿಟ್ಟಿನಲ್ಲಿತ್ತು. ಸಂಸ್ಕೃತ, ಅರೇಬಿಕ್ ಸಾಹಿತ್ಯವನ್ನು ರಾಷ್ಟ್ರೀಯ ಭಾವನೆಯ ಅಭಿವ್ಯಕ್ತಿಯಾಗಿಯೂ ರಾಷ್ಟ್ರೀಯತೆಯ ಪ್ರತಿಮಾ ಮೂಲವೂ ಆಗಿ ಪರಿಗಣಿಸಲಾಯ್ತು. ಆದರೆ ಪ್ರಾಕೃತ ಹಾಗೂ ದೇಶೀ ಭಾಷೆಗಳ ಬಗೆಗೆ ಅಷ್ಟಾಗಿ ಒಲವಿಲ್ಲದ್ದು ಕಂಡುಬರುತ್ತದೆ.

ಸ್ವಲ್ಪ ಹೆಚ್ಚೇ ಎನ್ನಬಹುದಾದ ಈ ವಿವರಗಳನ್ನು ನಾನು ಹೇಳಿದುದರ ಉದ್ದೇಶವೇನೆಂದರೆ- ಇಪ್ಪತ್ತನೇ ಶತಮಾನದಲ್ಲಿ ದೊಡ್ಡ ರೀತಿಯಲ್ಲಿ ವಿದ್ವತ್ ಜಗತ್ತಿನಲ್ಲಿ ತೊಡಗಿಸಿಕೊಂಡ ಭಾರತೀಯ ವಿದ್ವಾಂಸರಿಗೆ ಹಿನ್ನೆಲೆಯಾಗಿದ್ದ ಸಂದರ್ಭವನ್ನು ಸೂಚಿಸುವುದಾಗಿದೆ. ಪ್ರಾಚ್ಯವಿದ್ಯೆಗೆ ಸ್ವೋಪಜ್ಞ ಕಾಣಿಕೆಯನ್ನು ಸಲ್ಲಿಸಿದ ದೇಶೀಯ ವಿದ್ವಾಂಸರ ಸಾಲಿನಲ್ಲಿ ಡಾ. ಆ. ನೇ. ಉಪಾಧ್ಯೆಯವರಿಗೆ

ಅಗ್ರಸ್ಥಾನವಿದೆ. ಡಾ. ಎಸ್. ಕೆ. ಬೆಳ್ವಲ್ಕರ್, ಡಾ. ಪಿ.ಎಲ್. ವೈದ್ಯ, ಡಾ. ಪಿ.ಎನ್. ಸುಕ್ತಂಕರ್, ಡಾ. ಹೀರಾಲಾಲ್ ಜೈನ್ ಮೊದಲಾದ ವಿದ್ವಾಂಸರ ಮಾರ್ಗದರ್ಶನ ಸಹಯೋಗ ಅವರಿಗೆ ಲಭಿಸಿತು. ಸಂಸ್ಕೃತ, ಪ್ರಾಕೃತ ಹಾಗೂ ಇತರ ದೇಶೀ ಭಾಷೆಗಳಲ್ಲಿನ ಸಾಹಿತ್ಯ, ಶಾಸ್ತ್ರಕೃತಿಗಳನ್ನು ಬೆಳಕಿಗೆ ತರುವ ಕೆಲಸವನ್ನು ಈ ವಿದ್ವಾಂಸರು ಆಯ್ಕೆ ಮಾಡಿಕೊಳ್ಳುವಲ್ಲಿ ಈ ಹಿನ್ನೆಲೆಯ ಪ್ರಭಾವವೂ ಕಾರಣವಾಗಿದೆ. ಅತ್ಯಂತ ಕಠಿಣ ಪರಿಶ್ರಮ, ತಾಳ್ಮೆ, ನಿರಂತರ ವ್ಯಾಪಕ ಅಧ್ಯಯನಗಳಿಗೆ ತಮ್ಮನ್ನು ಒಪ್ಪಿಸಿಕೊಂಡ ಈ ವಿದ್ವಾಂಸರು ಏಕಕಾಲಕ್ಕೆ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ಅಧ್ಯಯನ ಶಿಸ್ತು, ಸ್ವರೂಪಗಳನ್ನು ಸೃಜನಶೀಲ ನೆಲೆಯಲ್ಲಿ ಸಂಯೋಜನೆಗೊಳಿಸಿದ್ದರು. ಅಂಥ ಸೃಜನಶೀಲ ಸಂಶೋಧನೆಯ ಫಲಿತಗಳನ್ನು ಜಾಗತಿಕ ಮಟ್ಟದ ಪ್ರಾಚ್ಯ ವಿದ್ಯಾತಜ್ಞರಾದ ಆ. ನೇ. ಉಪಾಧ್ಯೆಯವರಲ್ಲಿ ಕಾಣಬಹುದು. ಈ ನಿಟ್ಟಿನಲ್ಲಿ, 'ಧೂರ್ತಾಖ್ಯಾನ' ಕೃತಿಯ ಸಂಪಾದಕರಾಗಿ ಅವರು ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ವಿಚಾರಾರ್ಹವಾಗಿವೆ :

"ಅನೇಕ ಸಂಪ್ರದಾಯಗಳನ್ನು ಅಂತರ್ಗತ ಮಾಡಿಕೊಂಡ ಪಾಶ್ಚಾತ್ಯ ಸಾಹಿತ್ಯದಲ್ಲಿನ ವೈವಿಧ್ಯ ನಮ್ಮನ್ನು ಬೆರಗುಗೊಳಿಸುತ್ತದೆ. ಪ್ರಾಚೀನ ಭಾರತೀಯ ಸಾಹಿತ್ಯವನ್ನು ಇಂಗ್ಲಿಷ್ ಸಾಹಿತ್ಯದ ಜೊತೆ ಹೋಲಿಸುವ ಭಾರತೀಯ ವಿದ್ವಾಂಸರನ್ನು ಇಂಗ್ಲಿಷ್ ಸಾಹಿತ್ಯದ ವೈವಿಧ್ಯ, ಸ್ತರ, ಕಲಾತ್ಮಕತೆಗಳು ಬೆರಗುಗೊಳಿಸುತ್ತವೆ. ಈ ಭಿನ್ನತೆಯು ಎರಡೂ ನಾಗರಿಕತೆಗಳು ಹುಟ್ಟಿ ಬೆಳೆದ ವಿಶಿಷ್ಟ ರೀತಿಯಿಂದಾಗಿದೆ. ಆಂತರಿಕ ಗುಣಮೌಲ್ಯಗಳೇನೇ ಇರಲಿ, ಭಾರತದ ವಿಶಾಲ ಭೂವ್ಯಾಪ್ತಿ, ಜನ ಸಮೂಹ, ನಾಗರಿಕತೆಯ ದೀರ್ಘ ಇತಿಹಾಸಗಳನ್ನು ಗಮನಿಸಿದರೆ, ಪ್ರಾಚೀನ ಭಾರತೀಯ ಸಾಹಿತ್ಯದ ಪ್ರಮಾಣ ಹಾಗೂ ವೈವಿಧ್ಯ

ಇಂಗ್ಲಿಷ್‌ಗಿಂತ ಕಡಿಮೆ ಎನಿಸುತ್ತದೆ. ಇದಕ್ಕೆ ಕಾರಣಗಳು ಸ್ಪಷ್ಟವಾಗಿದೆ. ನಿರಂತರವಾಗಿ ನಡೆದ ಪಾಶ್ಚಾತ್ಯ ಪ್ರಭಾವದಿಂದ ತನ್ನನ್ನು ಪ್ರತ್ಯೇಕವಾಗಿಟ್ಟುಕೊಂಡು ಸುರಕ್ಷಿತ ನೆಲೆಯಲ್ಲಿ ಭಾರತೀಯ ಸಾಹಿತ್ಯ ಸ್ವಯಂತೃಪ್ತವಾಗಿದೆ. ಭಾರತೀಯ ಬದುಕು- ಸಾಹಿತ್ಯದ ಮೇಲೆ ಧರ್ಮದ ಪ್ರಭಾವ ಎಷ್ಟು ದಟ್ಟವೆಂದರೆ, ಸೆಕ್ಯುಲರ್ ಎನಿಸುವಂಥ ರಚನೆಗಳನ್ನೂ ಅದು ಆವರಿಸಿಬಿಟ್ಟಿದೆ. ಮೊದಲಿನಿಂದಲೂ ಬೆರಳೆಣಿಕೆಯ ಜನ ವಂಶಪಾರಂಪರ್ಯ ಬೌದ್ಧಿಕ ಅಧಿಕಾರವನ್ನು ಹೊಂದುತ್ತಾ ಬಂದಿದ್ದಾರೆ. ಪ್ರಾಚೀನತೆ ಎನ್ನುವುದು ಪರಂಪರಾಗತ ಸಂಪತ್ತಾದರೂ ತನ್ನಷ್ಟಕ್ಕೇ ತಾನು ಒಂದು ಮೌಲ್ಯವಲ್ಲ. ಹಳೆಯ ಬಗೆಯ ಅಭಿವ್ಯಕ್ತಿ, ಸಿದ್ಧ ಚಿಂತನೆಗಳು ಯಾಂತ್ರಿಕ ಮಾದರಿಗಳನ್ನು ಸೃಷ್ಟಿಸಿ, ಪ್ರಾಚೀನ ಭಾರತೀಯ ಸಾಹಿತ್ಯದ ಮೇಲೆ ಉಡದ ಹಿಡಿತವನ್ನು ಹೊಂದಿದ್ದವು. ಭಾರತೀಯ ಕವಿ, ಲೇಖಕನಿಗೆ ದೊರಕುವ ತರಬೇತಿಯೂ ಪ್ರಮಾಣಸಿದ್ಧವಾಗಿತ್ತು. ವಿಷಯ, ಆಶಯ, ಪಾತ್ರ, ವಿವರ, ವರ್ಣನೆ, ಶೈಲಿ ವಿಧಾನಗಳೆಲ್ಲವೂ ಸಿದ್ಧಮಾದರಿಯದಾಗಿದ್ದವು. ಇಂಥ ಸಂದರ್ಭದಲ್ಲಿ ಅತ್ಯಂತ ಪ್ರತಿಭಾಶಾಲಿ ಲೇಖಕ ಮಾತ್ರ ಈ ಒಪ್ಪಿತ ಮಾದರಿಗಳಿಂದ ಬಿಡಿಸಿಕೊಂಡು ಸ್ವೋಪಜ್ಞ ಹಾದಿಯನ್ನು ತೆರೆಯಲು ಸಾಧ್ಯವಾಗುತ್ತಿತ್ತು. ಇಂಥ ಉದಾಹರಣೆಗಳು ಪ್ರಾಚೀನ ಸಾಹಿತ್ಯದಲ್ಲಿದ್ದರೂ ವೈವಿಧ್ಯಕ್ಕೆ ಹೆಚ್ಚು ಅವಕಾಶವಿರಲಿಲ್ಲ. ರೋಮನರಲ್ಲಿದ್ದ ವಿಡಂಬನ ಸಾಹಿತ್ಯ, ಗ್ರೀಕರಲ್ಲಿದ್ದ ದುರಂತ ನಾಟಕ ಗುಣವುಳ್ಳ ಸಾಹಿತ್ಯ ನಮ್ಮಲ್ಲಿ ಬರಲೇ ಇಲ್ಲ- ಭಾರತೀಯ ರಸ, ಧ್ವನಿ ಮೀಮಾಂಸೆಯು ವಿಡಂಬನ ಸಾಹಿತ್ಯ ಸೃಷ್ಟಿಯಾಗದಂತೆ ಮಾಡಿದೆ." ಹೀಗೆ ಪಾರಂಪರಿಕ ಸಾಹಿತ್ಯವನ್ನು ವಿಮರ್ಶಿಸುತ್ತ ಉಪಾಧ್ಯೆಯವರು ಹರಿಭದ್ರಸೂರಿಯ ಪ್ರಾಕೃತ ಧೂರ್ತಾಖ್ಯಾನದಂಥ

ವಿಡಂಬನ ಸಾಹಿತ್ಯದ ಸಾಮಾಜಿಕ ಉಪಯುಕ್ತತೆಯನ್ನು ಎತ್ತಿ ಹಿಡಿಯುತ್ತಾರೆ. ಜ್ಯೋತಿಬಾ ಫುಲೆ ತಮ್ಮ '*ಗುಲಾಮಿ*' ಕೃತಿಯಲ್ಲಿ ಸಂವಾದದ ಶೈಲಿಯಲ್ಲಿ ಪೌರಾಣಿಕ ದೈವೀ ಕಲ್ಪನೆಯಲ್ಲಿನ ಸಂಗತಿಗಳನ್ನು ತೀವ್ರವಾಗಿ ವಿಡಂಬಿಸುತ್ತಾ ಖಂಡಿಸುತ್ತಾರೆ. ಧೂರ್ತಾಖ್ಯಾನವೂ ಇದೇ ಕಾರ್ಯವನ್ನು ಮಾಡಿದೆ. ಸಮಾಜದ ಲೋಪದೋಷಗಳಿಗೆ ಚಿಕಿತ್ಸೆಯನ್ನು ಕೊಡಲೆತ್ನಿಸುವ ಇಂಥ ಕೃತಿಗಳು ಧಾರ್ಮಿಕ ಕೃತಿಗಳಂತೆ ಮಾನ್ಯತೆ ಗಣಿಸಲಿಲ್ಲ. ಇಂಥ ಕೃತಿಗಳು ಅಲ್ಪ ಪ್ರಮಾಣದಲ್ಲಿ ಕಾಣಿಸಿಕೊಂಡವು ಎನ್ನುತ್ತಾ ಅಂಥ ಕೃತಿಗಳ ಪರಿಚಯವನ್ನು ಉಪಾಧ್ಯೆ ಮಾಡಿಕೊಡುತ್ತಾರೆ. ವೈದಿಕ ಚಿಂತನೆಯ ಧಾರೆಗೆ ಪ್ರತಿಕ್ರಿಯೆಯಾಗಿ ವಿಕಾಸಗೊಂಡ ಶ್ರಮಣಚಿಂತನೆ ಅಥವಾ ಮಗಧದ ಧಾರ್ಮಿಕ ಚಿಂತನೆಯ ಅಭಿವ್ಯಕ್ತಿಯಾಗಿ ವಿಡಂಬನ ಜೈನ ಸಾಹಿತ್ಯ ರೂಪುಗೊಂಡಿದ್ದನ್ನು ಉಪಾಧ್ಯೆ ಸಾಧಾರವಾಗಿ *ಧೂರ್ತಾಖ್ಯಾನದ* ಪೀಠಿಕೆಯಲ್ಲಿ ವಿವೇಚಿಸುತ್ತಾರೆ. ಭಾರತೀಯ ಧಾರ್ಮಿಕ, ಸಾಮಾಜಿಕ, ಇತಿಹಾಸ ನಿರೂಪಣೆಯಲ್ಲಿ ವೈದಿಕ ಚಿಂತನೆಗಳನ್ನು ಕೇಂದ್ರವಾಗಿಟ್ಟುಕೊಂಡು ಪ್ರಾಚ್ಯ ವಿದ್ಯಾಸಂಶೋಧನೆಯ ಮಿತಿಯನ್ನು ಮೀರುವಲ್ಲಿ ಉಪಾಧ್ಯೆಯವರ ಇಂಥ ಸಂಶೋಧನಾತ್ಮಕ ಚಿಂತನೆಗಳು ಸಹಾಯಕವಾದವು. *ಧೂರ್ತಾಖ್ಯಾನ, ಬೃಹತ್ಕಥಾಕೋಶ ವರಾಂಗಚರಿತ* ಕೃತಿಗಳಿಗೆ ಅವರು ಬರೆದಿರುವ ಪುಸ್ತಕಗಾತ್ರದ ಮುನ್ನುಡಿಗಳು ಭಾರತೀಯ ಇತಿಹಾಸ ಪುನಾರಚನೆಯನ್ನು ನಿಷ್ಪಕ್ಷಪಾತ, ಪರಿಪೂರ್ಣ, ಸ್ವೋಪಜ್ಞ ನೆಲೆಗೊಯ್ಯುತ್ತವೆ.

* * * * *

ಉಪಾಧ್ಯೆಯವರದು ಬರಹಪೂರ್ಣ ಬದುಕು. ಅವರು ಅಖಂಡ ೪೫ ವರ್ಷಗಳ ಅಧ್ಯಾಪನ ವೃತ್ತಿಯಲ್ಲಿದ್ದವರು. ೬-೨-೧೯೧೦ರಲ್ಲಿ

ಬೆಳಗಾವಿ ಜಿಲ್ಲೆಯ ಸದಲಗಾ ಗ್ರಾಮದ ಉಪಾಧ್ಯಾಯ ಕುಟುಂಬದಲ್ಲಿ ಇವರು ಜನಿಸಿದರು. ಪ್ರಾಥಮಿಕ ಶಿಕ್ಷಣ ಕನ್ನಡದಲ್ಲಾಯ್ತು. ನಂತರದ ಪ್ರೌಢ ಶಿಕ್ಷಣ, ಕೊಲ್ಲಾಪುರ, ಸಾಂಗ್ಲಿ, ಪುಣೆಗಳಲ್ಲಾದವು. ಕಾಲೇಜು ವಿದ್ಯಾಭ್ಯಾಸಕ್ಕೆ ಅನುಕೂಲಕರ ವಾತಾವರಣ ಅವರಿಗೆ ಕರ್ನಾಟಕದಲ್ಲಿ ದೊರೆಯಲಿಲ್ಲ. ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿಗೆ ಅವರು ಸೇರಬೇಕಾಯ್ತು. ಪುಣೆಯ ಭಂಡಾರಕರ ಓರಿಯಂಟಲ್ ಸಂಶೋಧನ ಸಂಸ್ಥೆಯಲ್ಲಿ ವ್ಯಾಸಂಗ ಮಾಡಿ ಪ್ರಾಕೃತ- ಸಂಸ್ಕೃತ ವಿಷಯಗಳಲ್ಲಿ ಎಂ.ಎ. ಪದವಿಯನ್ನು ಅವರು ಪಡೆದರು. ನಂತರ ಕೊಲ್ಲಾಪುರದ ರಾಜಾರಾಮ ಕಾಲೇಜಿನಲ್ಲಿ ಪ್ರಾಕೃತ ಅರ್ಧಮಾಗಧಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಹಾಗೂ ಪ್ರಾಕೃತ ಅಧ್ಯಯನ ವಿಭಾಗದ ಸ್ಥಾಪಕ ಪ್ರಾಧ್ಯಾಪಕರಾಗಿ ನಾಲ್ಕೂವರೆ ವರ್ಷ ಸೇವೆ ಸಲ್ಲಿಸಿದರು. "ಕನ್ನಡ ನನ್ನ ಮುದ್ದು ತಾಯ್ನುಡಿಯಾದರೂ ಪರಿಸ್ಥಿತಿಯ ಮೂಲಕ ನಾನು ಕನ್ನಡ ಮಾತುಗೆ ತುಸು ಪರಕೀಯನು" ಎಂದು ಅವರು ಹೇಳಿಕೊಂಡಿದ್ದಾರೆ. ಅವರು ತಾವು ಸಂಪಾದಿಸಿದ '*ಪ್ರವಚನಸಾರ*'ದ ಜೊತೆ '*ಪರಮಾತ್ಮ ಪ್ರಕಾಶ*', '*ವರಾಂಗ ಚರಿತೆ*'ಗಳನ್ನು ಸೇರಿಸಿ ಮುಂಬೈ ಯೂನಿವರ್ಸಿಟಿಗೆ ಡಾಕ್ಟರೇಟ್ ಪದವಿಗೆ ಸಲ್ಲಿಸಿದರು. ೧೯೩೯ರಲ್ಲಿ ಅದಕ್ಕೆ ಡಿ.ಲಿಟ್. ಪದವಿ ಪ್ರಾಪ್ತವಾಯಿತು. ಉಪಾಧ್ಯೆಯವರಿಗೆ ಸಾಹಿತ್ಯ ಸಂಶೋಧನೆಯಲ್ಲಿ ಪ್ರೇರಣೆ ನೀಡಿದ್ದು - ಕಾರಣಾಂತರದಿಂದ ಅವರ ಮನೆಗೆ ಬಂದ ಅವರ ದೊಡ್ಡಪ್ಪನವರ ದೊಡ್ಡ ಗ್ರಂಥ ಸಂಗ್ರಹ. ನಾನಾ ವಿಷಯದ ಬಗೆಗಿನ ಗ್ರಂಥಗಳು ಅವರದಲ್ಲಿದ್ದವು. ಬಾಲಕ ಉಪಾಧ್ಯೆ ಕುತೂಹಲದಿಂದ ಆ ಪುಸ್ತಕಗಳನ್ನು ಓದಲಾರಂಭಿಸಿದರು. ಅವರ ಮೊದಲ ಸಂಪ್ರಬಂಧದ ವಿಷಯವಾದ ಯೋಗೀಂದು ಕವಿಯ

'ದೋಹಾಪಾಹುಡ' ಎಂಬ ಅಪಭ್ರಂಶ ಕಾವ್ಯವು ಈ ಗ್ರಂಥ ಸಂಗ್ರಹದಲ್ಲಿತ್ತು. ಆ ಕವಿಯ ಉಳಿದ ಕಾವ್ಯಗಳನ್ನು ಅವಲೋಕಿಸಿ 'ಜೋ ಇಂದು ಅಂಡ್ ಹಿಸ್ ಅಪಭ್ರಂಶ ವರ್ಕ್ಸ್' ಎಂದು ಬರೆದ ಆ ಪ್ರಬಂಧ ಯುರೋಪಿಯನ್ ವಿದ್ವಾಂಸ ಊಲ್ನರ್‌ನ ಗಮನ ಸೆಳೆದು ಮೆಚ್ಚುಗೆ ಗಳಿಸಿತು. ಅಲ್ಲಿಂದ ಉಪಾಧ್ಯೆ ತಿರುಗಿ ನೋಡಲಿಲ್ಲ. ಶೋಲಾಪುರದ ಜೈನ ಸಂಸ್ಕೃತಿ ಸಂರಕ್ಷಕ ಸಂಘದ ವತಿಯಿಂದ ೧೯೭೭ರಲ್ಲಿ ಅವರ ವಿದ್ವತ್ ಸಾಧನೆಯ ಬರಹಗಳೆಲ್ಲವನ್ನು ಪರಿಚಯಿಸುವ ಕೃತಿ Bibliography of the works of Dr. A.N. Upadhye ಪ್ರಕಟವಾಯಿತು. ತಮ್ಮ ಕೃತಿಗಳ ಈ ವಿವರ ಪ್ರಕಟನೆಯ ಉದ್ದೇಶವನ್ನು ಉಪಾಧ್ಯೆ ಮುನ್ನುಡಿಯಲ್ಲಿ ಸೂಚಿಸಿದ್ದಾರೆ. ಪ್ರಾಕೃತ ಸಾಹಿತ್ಯ ಮತ್ತು ಭಾಷೆಯಿಂದ ದೊರೆಯುವ ಸೂಕ್ತ ಸಾಮಗ್ರಿಗಳು ಇಲ್ಲದೆ ತಮ್ಮ ಅಧ್ಯಯನಗಳು ಅಪೂರ್ಣವೆಂಬ ಅರಿವು ಪ್ರಾಚ್ಯ ಸಂಸ್ಕೃತಿ ಹಾಗೂ ಇಂಡೋ-ಆರ್ಯನ್ ಭಾಷೆಗಳ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಆಗಿದೆ. ಪರಿಣಾಮವಾಗಿ, ಅನೇಕ ವಿದ್ವಾಂಸರು ಪ್ರಾಕೃತ ಸಾಹಿತ್ಯ ಭಾಷಾ ಕ್ಷೇತ್ರದಲ್ಲಿದ್ದರೂ ಅದಿನ್ನೂ ಕನ್ನೆ ನೆಲವಾಗಿಯೇ ಉಳಿದಿದೆ. ಸಂಸ್ಕೃತ, ಪ್ರಾಕೃತ, ಪಾಳಿ ಸಾಹಿತ್ಯಗಳ ನಿಷ್ಪಕ್ಷಪಾತ ಮೌಲ್ಯ ನಿರ್ಧಾರದಿಂದ ಮಾತ್ರವೇ ಪ್ರಾಚೀನ ಭಾರತದ ನೈಜ ಚಿತ್ರಣ ದೊರೆಯಲು ಸಾಧ್ಯ. ತಮ್ಮ ಹಳೆಯ ವಿದ್ವತ್ ಲೇಖನಗಳ ಪರಾಮರ್ಶೆಗಾಗಿ ಸಹೋದ್ಯೋಗಿಗಳಿಂದ ಕೋರಿಕೆ ಬಂದಿದ್ದರಿಂದ ಹಾಗೂ ಅವರ ಕೋರಿಕೆ, ಸಲಹೆಯ ಮೇರೆಗೆ ತಾನು ಈ ಗ್ರಂಥ ವಿವರಣ ಪಟ್ಟಿಯನ್ನು ಹೊರ ತರುತ್ತಿದ್ದೇನೆಂದು ಉಪಾಧ್ಯೆ ಹೇಳಿದ್ದಾರೆ. ಉಪಾಧ್ಯೆಯವರೇ ತಮ್ಮ ಸಂಶೋಧನ ಸಾಹಿತ್ಯವನ್ನು ವರ್ಗೀಕರಿಸಿದ್ದಾರೆ.

ಅವರು, ಭಾರತೀಯ ಅಧ್ಯಯನ (Indological Studies) ಕ್ಕೆ ಸಲ್ಲಿಸಿದ ಕೊಡುಗೆಗಳು ಎರಡು ಸ್ವರೂಪದವು. ಮೊದಲನೆಯದು, ಪ್ರಾಕೃತ ಹಾಗೂ ಸಂಸ್ಕೃತ ಸಂಪಾದಿತ ಕೃತಿಗಳು. ಇವುಗಳಲ್ಲಿ ಕೆಲವು ಮೊದಲ ಬಾರಿಗೆ ಅಧಿಕೃತವಾಗಿ ಅಪರೂಪದ ಹಸ್ತಪ್ರತಿ ಸಾಮಗ್ರಿಗಳನ್ನು ಬಳಸಿ, ಕವಿ, ಕೃತಿ, ಕಾಲ, ದೇಶ, ಮೂಲ, ಪ್ರಭಾವ, ಶೈಲಿ, ಭಾಷೆ, ಛಂದಸ್ಸು ಹೀಗೆ ಸಮಗ್ರ ವಿಷಯಗಳನ್ನು ಒಳಗೊಂಡ ಚರ್ಚೆಯುಳ್ಳ ದೀರ್ಘ ಪ್ರಸ್ತಾವನೆಯನ್ನು ಒಳಗೊಂಡವುಗಳು. ಎರಡನೆಯದು, ಹೊಸ ವಿಷಯಗಳನ್ನು ಬೆಳಕಿಗೆ ತಂದ ಅಥವಾ ಹಳೆಯ ವಿಷಯಗಳೊಂದಿಗೆ ಸಂಬಂಧಿಸಿದಂತೆ ಮುಂದುವರೆದ ಪ್ರೌಢ ಚಿಂತನೆಯುಳ್ಳ ಪ್ರತ್ಯೇಕ ಲೇಖನಗಳು. ಅಸಗ, ಕವಿಪರಮೇಷ್ಠಿ, ಯಾಪನೀಯ ಪಂಥ, ಗೊಮ್ಮಟ, ಪಂಚಸ್ತೂಪಾನ್ವಯ ಇತ್ಯಾದಿ ಸಂಶೋಧನ ಲೇಖನಗಳು ಅತ್ಯಂತ ಕುತೂಹಲಕರ ವಿಷಯಗಳನ್ನು ಮೊದಲಬಾರಿ ಪ್ರಸ್ತುತಪಡಿಸುತ್ತವೆ.

ಡಾ. ಆ. ನೇ. ಉಪಾಧ್ಯೆ ಅವರ ಸಂಪಾದಿತ ಕೃತಿಗಳಲ್ಲಿ *ಪಂಚಸುತ್ತಂ, ಪ್ರವಚನಸಾರ, ಪರಮಾತ್ಮ ಪ್ರಕಾಶ, ತಿಲೋಯ ಪಣ್ಣತ್ತಿ, ಕಾರ್ತಿಕೇಯಾನುಪ್ರೇಕ್ಷಾ, ಜಂಬೂದೀವ ಪಣ್ಣತ್ತಿ, ಆತ್ಮಾನುಶಾಸನ, ಪಂಚವಿಂಶತಿ, ಆರಾಧನಾಸಮುಚ್ಚಯ* ಮತ್ತು *ಯೋಗಸಾರ, ಧರ್ಮರತ್ನಾಕರ, ಪಂಚಾಸ್ತಿಕಾಯಸಾರ, ಜ್ಞಾನಾರ್ಣವ*- ಇವು ನೇರವಾಗಿ ಜೈನ ಧರ್ಮ ಮತ್ತು ತತ್ತ್ವ-ಸಿದ್ಧಾಂತಗಳಿಗೆ ಸಂಬಂಧಿಸಿದವುಗಳಾಗಿವೆ; ಸಿದ್ಧಸೇನ ದಿವಾಕರನ ನ್ಯಾಯಾವತಾರವು ಜೈನ ತರ್ಕ-ಪ್ರಮಾಣ ಶಾಸ್ತ್ರಕ್ಕೆ ಸಂಬಂಧಿಸಿದ ಕೃತಿಯಾಗಿದೆ; *ವರಾಂಗಚರಿತ, ಲೀಲಾವಈ, ಕುವಲಯಮಾಲಾ, ಕುವಲಯಮಾಲಾ ಕಥಾಸಂಕ್ಷೇಪ, ಬೃಹತ್ಕಥಾಕೋಶ, ಕಥಾಕೋಶ, ಪುಣ್ಯಾಸ್ರವ*

*ಕಥಾಕೋಶ*- ಇವು ಜೈನ ಚರಿತ-ಕಾವ್ಯ ಮತ್ತು ಕಥಾ ಸಾಹಿತ್ಯಕ್ಕೆ ಸೇರಿದ ಕೃತಿಗಳಾಗಿವೆ; *ಧೂರ್ತಾಖ್ಯಾನವು* ಭಾರತೀಯ ಸಾಹಿತ್ಯದಲ್ಲಿಯೇ ವಿಶಿಷ್ಟವಾದ ಕೃತಿಯಾಗಿದ್ದು ವಿಡಂಬನ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿದೆ. *ಕಂಸವಹೋ* ಕಾವ್ಯವು ಜೈನೇತರ ಭಾಗವತ ಪರಂಪರೆಯ ಕೃಷ್ಣನ ಮಹಿಮೆಯನ್ನು ಕಂಸವಧೆಯ ಮೂಲಕ ತಿಳಿಸುವ ಪ್ರಾಕೃತ ಕೃತಿಯಾಗಿದೆ. *ಉಷಾನಿರುದ್ಧಂ, ಚಂದ್ರಲೇಖಾ, ಆನಂದಸುಂದರೀ, ಶೃಂಗಾರಮಂಜರೀ*- ಈ ನಾಲ್ಕು ಪ್ರಾಕೃತ ಸಟ್ಟಕ-ನಾಟಕಗಳು ಯಾವುದೇ ಧಾರ್ಮಿಕ ಸ್ಪರ್ಶವಿಲ್ಲದ ಶುದ್ಧಸಾಹಿತ್ಯ ಕೃತಿಗಳಾಗಿವೆ.

*ಪಂಚಸುತ್ತಂ, ವರಾಂಗಚರಿತ, ಬೃಹತ್‌ಕಥಾಕೋಶ, ಕಂಸವಹೋ, ಲೀಲಾವಈ, ಚಂದಲೇಹಾ, ಆನಂದಸುಂದರೀ, ಕುವಲಯಮಾಲಾ* ಮುಂತಾದ ಕೃತಿಗಳು ಮೊದಲ ಬಾರಿಗೆ ಪ್ರಕಾಶನಗೊಂಡವು. ಈ ಕೃತಿಗಳನ್ನು ವಿವಿಧ ಮಗ್ಗುಲುಗಳಿಂದ ಆಳವಾಗಿ ಅಧ್ಯಯನ ಮಾಡಿ, ಭಾರತೀಯ ಸಾಹಿತ್ಯದಲ್ಲಿ ಅವುಗಳ ಸ್ಥಾನ ನಿರ್ದೇಶನ ಮಾಡಿರುವುದು ಮಹತ್ವದ ಸಂಗತಿಯಾಗಿದೆ.

ಪ್ರಾಕೃತ, ಅಪಭ್ರಂಶ, ಸಂಸ್ಕೃತ ಕೃತಿಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡದೆ, ಒಟ್ಟು ಭಾರತೀಯ ಸಂಸ್ಕೃತಿ, ಸಾಹಿತ್ಯದ ಬೃಹತ್ ವಿನ್ಯಾಸದ ಹಿನ್ನೆಲೆಯಲ್ಲಿ ಪರಿಭಾವಿಸಬೇಕೆಂದು ಉಪಾಧ್ಯೆ ಹೇಳುತ್ತಾರೆ. *ಬೃಹತ್ಕಥಾಕೋಶ, ಪರಮಾತ್ಮ ಪ್ರಕಾಶ, ಧೂರ್ತಾಖ್ಯಾನಗಳನ್ನು* ಈ ಸಂಗತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವರು ಸಂಪಾದಿಸಿದ್ದಾರೆ. *ಚಂದಲೇಹಾ* ನಾಟಕದ ಪ್ರಸ್ತಾವನೆಯಲ್ಲಿ ಹಸ್ತಪ್ರತಿಯಲ್ಲಿರುವ ಅನೇಕ ಸಟ್ಟಕ-ನಾಟಕ ಪ್ರಕಾರಗಳನ್ನು ಪರಿಚಯಿಸುತ್ತ ಅವುಗಳ ಅಧ್ಯಯನದ ಮೂಲಕ ಭಾರತೀಯ ನಾಟಕ ಪ್ರಕಾರದ ವಿಕಾಸವನ್ನು ಪುನಾರಚಿಸುತ್ತಾರೆ.

* * * * *

'*ಪಂಚಸುತ್ತಂ*' ಎಂಬ ಚಿಕ್ಕ ಕೃತಿಯ ಪ್ರಸ್ತಾವನೆಯಲ್ಲಿ ಕೃತಿಯೊಳಗಿನ ವಿಷಯಗಳನ್ನು ಉಪಾಧ್ಯೆ ಮೊದಲಿಗೆ ಸಂಗ್ರಹಿಸುತ್ತಾರೆ. ಈ ಕೃತಿಯ ಸ್ವರೂಪವನ್ನು ಉಪಾಧ್ಯೆ ಖಚಿತವಾದ ಮಾತುಗಳಲ್ಲಿ ಹೀಗೆ ಸ್ಪಷ್ಟಪಡಿಸುತ್ತಾರೆ : "It is a small manual for the guidance of an aspirant to liberation". ಭಾರತೀಯ ಧಾರ್ಮಿಕ ಕೃತಿಗಳನ್ನು ತಪ್ಪಾಗಿ ಗ್ರಹಿಸಿದ ಓರಿಯಂಟಲಿಸ್ಟರ ಮಿತಿಗಳನ್ನು ಇಲ್ಲಿ ಉಪಾಧ್ಯೆ ಪ್ರಸ್ತಾಪಿಸುತ್ತಾರೆ. ಜೈನ ನೀತಿಯು ಆದರ್ಶದ ಪರಾಕಾಷ್ಠೆ ಹೊಂದಿದ್ದು ಸಾಮಾನ್ಯರ ಪಾಲಿಗೆ ದೂರ ಉಳಿಯಿತೆಂಬ ಆರೋಪಕ್ಕೆ ಸಮರ್ಥ ಉತ್ತರವನ್ನು ಅವರು ನೀಡಿದ್ದಾರೆ. ಜೈನ ಧರ್ಮದ ಅಧ್ಯಯನದಲ್ಲಿ ಮೊದಲಿಗೆ ತೊಡಗಿದ ವಿದ್ವಾಂಸರು ಆಕಸ್ಮಿಕವೊ ಎಂಬಂತೆ ಮುನಿಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಮಾತ್ರ ಲಕ್ಷ್ಯದಲ್ಲಿಟ್ಟುಕೊಂಡರು. ಮೂಲ ಸಾಮಗ್ರಿಯನ್ನು ನೇರ ಬಳಸಿಕೊಳ್ಳದ್ದರಿಂದ ಶ್ರಾವಕ ಹಾಗೂ ಮುನಿಗಳ ಭೇದ ಕಲ್ಪನೆ ಅವರಿಗಾಗಲಿಲ್ಲ. '*ಪಂಚಸುತ್ತಂ*'ದಂಥ ಕೃತಿಯು ಗೃಹಸ್ಥರಿಗೆ ಧಾರ್ಮಿಕ ಬದುಕನ್ನು ಹೇಗೆ ವ್ಯವಸ್ಥೆಗೊಳಿಸಿಕೊಳ್ಳಬೇಕೆಂಬ ಮಾರ್ಗದರ್ಶನ ನೀಡುತ್ತಾದ್ದರಿಂದ ಈ ತಪ್ಪನ್ನು ವಿದ್ವಾಂಸರು ಸರಿಪಡಿಸಿಕೊಳ್ಳಲು ಅವಕಾಶವಾಗುತ್ತದೆ ಎಂದು ಉಪಾಧ್ಯೆ ವಿಮರ್ಶಿಸುತ್ತಾರೆ. ಬೌದ್ಧ ಹಾಗೂ ಜೈನರಲ್ಲಿ, ತನ್ನ ತಪ್ಪುಗಳನ್ನು ಗೃಹಸ್ಥ ಧಾರ್ಮಿಕರು ಗುರು ಸಮ್ಮುಖದಲ್ಲಿ ನಿವೇದನೆ ಮಾಡಿಕೊಳ್ಳುವ ಪರಿಪಾಠವಿದೆ. ಅನೇಕ ವಿದೇಶೀ ವಿದ್ವಾಂಸರು ಕ್ರೈಸ್ತರಲ್ಲಿರುವ ಪಾಪನಿವೇದನೆಯೊಂದಿಗೆ ಇದು ಹೋಲುವುದಾಗಿ ಹೇಳುತ್ತಾರೆ, ಸಾಮ್ಯವನ್ನು ಕಂಡಿದ್ದಾರೆ. ಕ್ರಿಸ್ತನ ಬದುಕಿನ ಹದಿನೆಂಟು ಅಜ್ಞಾತ ವರ್ಷಗಳಲ್ಲಿ ಭಾರತದ ಜೈನ-ಬೌದ್ಧ

ಮುನಿಗಳೊಂದಿಗಿನ ಭೇಟಿಯ ಸಾಧ್ಯತೆ ಇದೆ ಎಂದು ರಷ್ಯನ್ ಸಾಹಿತಿ Nicolos Notovitch ಹೇಳಿದ್ದಾನೆ. ಅದರೆಡೆ ಉಪಾಧ್ಯೆ ನಮ್ಮ ಗಮನ ಸೆಳೆಯುತ್ತಾರೆ. ಈ ಕೃತಿಯ ಕೊನೆಯ ಭಾಗದಲ್ಲಿ ನಿರ್ವಾಣದ ಬಗೆಗೆ ಜೈನೀಯ ವಿವರಣೆ ಇದೆ. ಬೌದ್ಧ ತಾತ್ತ್ವಿಕರಲ್ಲಿ ನಿರ್ವಾಣದ ವಿಷಯ ಹೆಚ್ಚು ಚರ್ಚೆಗೊಳಗಾಗಿದ್ದು, ಪಾಲಿಗ್ರಂಥಗಳಲ್ಲಿನ ನಿರ್ವಾಣದ ವಿವರಣೆಯೊಂದಿಗೆ ಈ ವಿವರಣೆ ಹತ್ತಿರವಾಗಿರುವುದನ್ನು ಉಪಾಧ್ಯೆ ಗುರುತಿಸುತ್ತಾರೆ.

ನಂತರದ ದಿನಗಳಲ್ಲಿ ಕ್ಷಣಿಕವಾದವನ್ನು ಅಧಿಭೌತಿಕ ಸಮಸ್ಯೆಯ ವ್ಯಾಪ್ತಿಯೊಳಕ್ಕೆ ಬೌದ್ಧರು ತಂದಿದ್ದರು. ಪರಿಣಾಮವಾಗಿ 'ನಿರ್ವಾಣ'ದ ಕಲ್ಪನೆಯೇ ಅರ್ಥಶೂನ್ಯ ಎಂಬ ಅಭಿಪ್ರಾಯ ಬೌದ್ಧರಲ್ಲಿ ನೆಲೆಗೊಳ್ಳಲು ಕಾರಣವಾಯಿತೆಂಬ ಅಭಿಪ್ರಾಯಕ್ಕೆ ಉಪಾಧ್ಯೆ ಬರುತ್ತಾರೆ. ಧರ್ಮಶಾಸ್ತ್ರಗಳ ತೌಲನಿಕ ಹಾಗೂ ಚಾರಿತ್ರಿಕ ಅಧ್ಯಯನ ಕ್ಷೇತ್ರಕ್ಕೆ ಸಂಶೋಧನೆ ಹೇಗೆ ಪೂರಕವಾಗಬಲ್ಲದು ಎಂಬ ಮಾದರಿ ಇಂಥ ಹೊಳಹುಗಳಲ್ಲಿದೆ.

* * * * *

ಗ್ರಂಥಸಂಪಾದನಾ ಕ್ಷೇತ್ರಕ್ಕೆ ಉಪಾಧ್ಯೆಯವರ ಕೊಡುಗೆ ಚಿರಸ್ಥಾಯಿಯಾದುದು. ಅವರ ಕೃತಿಗಳ ದೀರ್ಘ ಪ್ರಸ್ತಾವನೆ, ಅನುಬಂಧದಲ್ಲಿನ ಶಬ್ದಾರ್ಥಕೋಶ, ಅನುವಾದ, ಸಾರಾಂಶ, ಅಡಿ ಟಿಪ್ಪಣಿಗಳು- ಇವೇ ಗ್ರಂಥಸಂಪಾದನೆಯ ತರಬೇತಿಯನ್ನು ವಿದ್ಯಾರ್ಥಿಗೆ ಕೊಡಬಲ್ಲವು. ಪಾಠನಿರ್ಣಯ ಪಾಠ ಪರಿಷ್ಕರಣಗಳೂ ಅಧಿಕಾರ ಸಂರಚನೆಯ ಭಾಗಗಳಾದ್ದರಿಂದ ಕೃತಿಯೊಂದರ ಪ್ರತಿಯೊಂದು ಹಸ್ತಪ್ರತಿಗೂ ಸ್ವತಂತ್ರ ಸ್ಥಾನ ನೀಡಬೇಕೆಂಬ ಇತ್ತೀಚಿನ

ವಿದ್ಯಮಾನವು ಗ್ರಂಥ ಸಂಪಾದನೆಯ ಸವಾಲಾಗಿದೆ. ಭಾಷಾವಿಜ್ಞಾನ, ಕಲೆ, ಮೀಮಾಂಸೆ, ಛಂದಸ್ಸು, ವ್ಯಾಕರಣ, ತತ್ವಶಾಸ್ತ್ರ, ಧರ್ಮ, ಚರಿತ್ರೆಗಳೊಂದಿಗೆ ಬಹುಭಾಷಾ ಜ್ಞಾನವುಳ್ಳ ಉಪಾಧ್ಯೆ ಈ ಸವಾಲನ್ನು ಯಶಸ್ವಿಯಾಗಿ ನಿರ್ವಹಿಸಿದರು.

ಮೊದಲನೇ ಬಾರಿಗೆ ಹಲವಾರು ಮಹತ್ವದ ಕೃತಿಗಳನ್ನು ಸಂಪಾದನೆ ಮಾಡುವ ಸಂದರ್ಭದಲ್ಲಿ ಹಸ್ತಪ್ರತಿ ಸಾಮಗ್ರಿಗಳನ್ನು ಬಳಸಿಕೊಳ್ಳುವಲ್ಲಿ ತೀವ್ರ ಎಚ್ಚರವನ್ನು ಉದ್ದಕ್ಕೂ ಉಪಾಧ್ಯೆ ವಹಿಸುತ್ತಾರೆ. ಹಸ್ತಪ್ರತಿಗಳ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಹಸ್ತಪ್ರತಿ ಎದುರಿಗಿಟ್ಟುಕೊಂಡು ಅವರು ವಿವರಿಸಿ ತೋರಿಸುತ್ತಿದ್ದಾರೇನೋ ಎಂಬಂತೆ ಪ್ರಾತ್ಯಕ್ಷಿಕ ಅನುಭವ ನಮಗಾಗುತ್ತದೆ. ಹಸ್ತಪ್ರತಿಯನ್ನು ಅವರು ದೊರಕಿಸಿಕೊಂಡ ಬಗೆ, ಹಸ್ತಪ್ರತಿ ಲಭ್ಯವಾದ ಮೂಲ, ಹಸ್ತಪ್ರತಿಯ ಸ್ವರೂಪ, ಬಳಸಿದ ಶಾಯಿ, ಅಲಂಕರಣ, ಲಿಪಿಕಾರರ ಸ್ಖಾಲಿತ್ಯಗಳು, ಲಿಪಿಸ್ವರೂಪ, ಮೂಲ ಪ್ರತಿಯ ವಿವರ, ಅಂಚು ಪಟ್ಟಿಯಲ್ಲಿನ ಸೂಚನೆ, ಲಿಪಿಕಾರರು ಬಳಸುವ ಸಂಕೇತಗಳು- ಎಲ್ಲ ವಿವರಗಳ ಮೂಲಕ ಕೃತಿಗಳ ಬಗೆಗೆ ಮಹತ್ವದ ಒಳ ನೋಟಗಳನ್ನು ಅವರು ಕಟ್ಟಿಕೊಡುತ್ತಾರೆ.

ಹಸ್ತಪ್ರತಿ ಸಾಮಗ್ರಿಗೆ ತಾವು ಪೂರ್ಣ ನಿಷ್ಠರಾಗಿದ್ದು ಅವುಗಳ ಸ್ವರೂಪಕ್ಕೆ ಹೊರತಾದ್ದೇನನ್ನೂ ತಾವು ಪ್ರತಿಪಾದಿಸುತ್ತಿಲ್ಲವೆಂಬ ಪ್ರಾಮಾಣಿಕ ನಿವೇದನೆ ಅವರ ಸಂಪಾದನೆಯ ಬರಹಗಳಲ್ಲಿದೆ- 'I have faithfully handled the material and never trespassed its limits.'

* * * * *

ಉಪಾಧ್ಯೆ ಅವರು '*ಕಂಸವಹೋ*' ಕೃತಿ ಸಂಪಾದನೆಗೆ ಬಳಸಿದ ಕಾಗದದ ಹಸ್ತಪ್ರತಿಯು ಮೂಲ ತಾಳೆಗರಿ ಹಸ್ತಪ್ರತಿಯ ಲಿಪ್ಯಂತರ (transliteration) ಎಂದು ನಿರ್ಧರಿಸುತ್ತಾರೆ. ಒಟ್ಟು ಮೂರು ಹಸ್ತ ಪ್ರತಿಗಳಲ್ಲಿ ಎರಡು ಪ್ರತಿಗಳು ದೇವನಾಗರಿಯದಾಗಿದ್ದು, ಮೂರನೆಯದು ಮಲಯಾಳಂ ಲಿಪಿಯ ಹಸ್ತಪ್ರತಿಯಾಗಿರುತ್ತದೆ. ದೇವನಾಗರಿಗೆ ಲಿಪ್ಯಂತರಗೊಂಡ ಹಸ್ತಪ್ರತಿಯಲ್ಲಿ ಕ್ರಮರಾಹಿತ್ಯ, ಲಿಪಿದೋಷಗಳಿರುವುದನ್ನು ಗುರುತಿಸಿ, ಈ ಲಿಪಿದೋಷಗಳು ಮೂಲ ಮಲಯಾಳಂ ಲಿಪಿಯ ಪ್ರತಿಯಲ್ಲಿರುವುದಾಗಿ ಅವರು ಸ್ಥಾಪಿಸುತ್ತಾರೆ. ಹಸ್ತಪ್ರತಿ ನಕಲು ಮಾಡುವವರು ಪ್ರಾಕೃತದ ತಿಳಿವಳಿಕೆ ಇಲ್ಲದೆ ಮೂಲವನ್ನು ತಪ್ಪಾಗಿ ಓದಿರಬಹುದೆನ್ನುತ್ತಾರೆ. ಆದರೆ ಸಂಸ್ಕೃತ ಛಾಯೆಯನ್ನು ಲಿಪಿಗೊಳಿಸುವ ಸಂದರ್ಭದಲ್ಲಿ ಲಿಪಿಕಾರರು ಹೆಚ್ಚು ಎಚ್ಚರಿಕೆಯಿಂದಿದ್ದಾರೆ ಎಂಬುದನ್ನು ಉಪಾಧ್ಯೆ ಗಮನಿಸುತ್ತಾರೆ.

ಪ್ರಾಕೃತ ಭಾಷೆಯ ಅರಿವಿಲ್ಲದ ಲಿಪಿಕಾರರು ಗ್ರಂಥ, ಕನ್ನಡ, ಮಲಯಾಳಂ, ತೆಲುಗು ಲಿಪಿಗಳಲ್ಲಿ ಅನುಸ್ವಾರ ಹಾಗೂ ಒತ್ತಕ್ಷರಗಳಿಗೆ ಕ್ರಮವಾಗಿ ಬಳಸುವ ಚಿಕ್ಕ ಬಿಂದು ಹಾಗೂ ದೊಡ್ಡ ಬಿಂದುಗಳನ್ನು ಲಿಪ್ಯಂತರದಲ್ಲಿ ಬಳಸಿದ್ದಾರೆ. ಇವೆರಡರ ನಡುವೆ ವ್ಯತ್ಯಾಸ ಗೊತ್ತಿಲ್ಲದಿದ್ದರೂ ದೇವನಾಗರಿಗೆ ಈ ಮಲಯಾಳಂ ಹಸ್ತಪ್ರತಿಗಳ ಲಿಪ್ಯಂತರ ಮಾಡುವಾಗ ದೊಡ್ಡ ಬಿಂದುವನ್ನು ಬಳಸುವಾಗ ಮೂಲದ ಅಸಾದೃಶ್ಯ ಸಂಯುಕ್ತ ವ್ಯಂಜನ ರೂಪಕ್ಕೆ ಬದಲಾಗಿ ಸಾದೃಶ್ಯ ಒತ್ತಕ್ಷರಗಳನ್ನು ತಂದಿಟ್ಟರು. ಉದಾಹರಣೆಗೆ, ಮಲಯಾಳಂ ಲಿಪಿಯಲ್ಲಿದ್ದ ಪ್ರಾಕೃತದ ಮೊಕ್ಖ ಪದವನ್ನು ದೇವನಾಗರಿಗೆ ಲಿಪ್ಯಂತರ ಮಾಡುವಾಗ ಅದು ಮೊಕ್ಕ ಎಂದು ಬದಲಾಯಿತು. ಆದಕಾರಣ, ಅಸಾದೃಶ್ಯ ಸಂಯುಕ್ತ ವ್ಯಂಜನದ ಬಳಕೆಯನ್ನು ದೊಡ್ಡ ಬಿಂದು

ಇರುವೆಡೆಯಲ್ಲೆಲ್ಲಾ ಉಪಾಧ್ಯೆಯವರು ಮಾಡಿದ್ದಾರೆ. ಅನುನಾಸಿಕದ ಅರಿವೇ ಇಲ್ಲದ ಈ ಹಸ್ತಪ್ರತಿಗಳಲ್ಲಿ 'ಳ'ದ ಬಳಕೆ ಇರುವೆಡೆ ಅನುನಾಸಿಕದ ಬಳಕೆ ಮಾಡಿದ್ದಾರೆ.

ಮೊದಲಿಗೆ, ಹಸ್ತಪ್ರತಿಯ ಲಿಪಿದೋಷಗಳಿಂದ ತಾವು ದಿಗ್ಭ್ರಾಂತರಾದುದಾಗಿ ಉಪಾಧ್ಯೆ ಹೇಳುತ್ತಾರೆ. ಆದರೆ ಲಿಪ್ಯಂತರಿತ ಹಸ್ತಪ್ರತಿಗಳ ಶ್ರಮಪೂರ್ಣ ಅಧ್ಯಯನದಿಂದ ಲಿಪಿದೋಷಗಳನ್ನು ಅವರು ತಿದ್ದಿ, ಖಾಲಿ ಜಾಗಗಳನ್ನು ತುಂಬಿ ಸರಿಯಾದ ಓದು ದಕ್ಕುವಂತೆ ಮಾಡಿದ್ದಾರೆ. ರಾಮಪಾಣಿವಾದನು ವರರುಚಿಯ ಪ್ರಾಕೃತ ಪ್ರಕಾಶವೆಂಬ ವ್ಯಾಕರಣ ಗ್ರಂಥಕ್ಕೆ ವ್ಯಾಖ್ಯಾನ ರಚಿಸಿದ್ದಾನೆ. ಹೀಗಾಗಿ ಕವಿ ವರರುಚಿಯ ಸೂತ್ರಗಳ ಪಾಲಕನಾದುದರಿಂದ ಅರ್ಥಹೀನ ಎನಿಸುವಂಥ ಲಿಪಿದೋಷಗಳುಳ್ಳ ಪದಗಳನ್ನು ವರರುಚಿಯ ಸೂತ್ರದ ಬೆಳಕಿನಲ್ಲಿ ಉಪಾಧ್ಯೆ ಪರಿಶೀಲಿಸುತ್ತಾರೆ. ಶಂಕಾಸ್ಪದ ಪಾಠಗಳನ್ನು ಲಿಪಿದೋಷವೆಂದು ತ್ಯಜಿಸದೆ ಛಂದಸ್ಸಿನ ಅವಶ್ಯಕತೆಗಾಗಿ ಅವುಗಳನ್ನು ಅಳವಡಿಸಿಕೊಂಡಿರುವ ಸಾಧ್ಯತೆಯನ್ನು ಉಪಾಧ್ಯೆ ಎತ್ತಿಹಿಡಿಯುತ್ತಾರೆ. ಪ್ರಾಕೃತ ಭಾಷೆಯ ರೂಢಿಗೆ ಸರಿಹೊಂದದ ರೂಪಗಳುಳ್ಳ ಶಬ್ದಗಳನ್ನು ರೂಢಿಗನುಗುಣವಾಗಿ ಮಾರ್ಪಡಿಸಿ ಬಳಸಿಕೊಂಡಾಗ asterisk ಚಿಹ್ನೆಯಿಂದ ಅದನ್ನು ಸ್ಪಷ್ಟಪಡಿಸುತ್ತಾರೆ. ತಮ್ಮ ಸೂಚನೆಗಳೇ ಅಂತಿಮವೇನಲ್ಲ. ಈ asterisk ಗಳು ಓದುಗರ ಗಮನಸೆಳೆದು ತನ್ನ ಸಲಹೆಯ ಕುರಿತ ಪರ-ವಿರೋಧದ ಚರ್ಚೆಗೆ ಅವಕಾಶವಾಗವೆಂಬ ನಿರೀಕ್ಷೆ ಅವರದು. ಪ್ರಾಕೃತ ಧ್ವನಿ ವ್ಯವಸ್ಥೆಯಲ್ಲಿ ಅವಗ್ರಹಕ್ಕೆ ನ್ಯಾಯಬದ್ಧ ಸ್ಥಾನವಿಲ್ಲದಿದ್ದರೂ ಸಂಸ್ಕೃತ ಪ್ರಭಾವಕ್ಕೊಳಗಾದ ಕವಿ ಅದನ್ನು ಬಳಸಿದ್ದರಿಂದ ಅವಗ್ರಹ ಚಿಹ್ನೆಯನ್ನು ಅವರೂ ಪಠ್ಯದಲ್ಲಿ ಅಲ್ಲಲ್ಲಿ ಬಳಸಿದ್ದಾರೆ.

ಕಂಸವಧಾ ಪ್ರಸಂಗವನ್ನು ಕುರಿತ ಭಾರತೀಯ ಕೃತಿಗಳ ಪರಿಚಯವನ್ನು ಉಪಾಧ್ಯೆ ನೀಡುತ್ತಾರೆ. ಭಟ್ಟಿಯ *ರಾವಣವಧಾ* ಹಾಗೂ ಮಾಘನ *ಶಿಶುಪಾಲವಧಾ*ದೊಂದಿಗೆ ಈ ಕೃತಿಕಾರನಿಗೆ ನಿಕಟ ಪರಿಚಯವಿತ್ತೆಂದು ಅವರು ಸ್ಥಾಪಿಸುತ್ತಾರೆ. ಕೃತಿಯ ಸಾರಾಂಶವನ್ನು ನೀಡುತ್ತ ಅದರ ಮಿತಿಗಳನ್ನು ಉಪಾಧ್ಯೆ ವಿವೇಚಿಸುತ್ತಾರೆ. ಕೆಲವು ಭಾಗಗಳು ಸನ್ನಿವೇಶಕ್ಕೆ ಹೊಂದದ ಅನಗತ್ಯ ಭಾಗಗಳಾಗಿ ಅವರಿಗೆ ಕಂಡಿವೆ. ಗೋಪಿಯರ ವಿರಹತಪ್ತ ಹಾಡುಗಳಲ್ಲಿ ಕವಿತ್ವ ಪ್ರಕಾಶನಕ್ಕೆ ಅವಕಾಶ ದೊರೆತಿದೆ ಎಂಬ ಅನಿಸಿಕೆ ಅವರದು. ರಾಮಪಾಣಿವಾದನು ಭಾಗವತಕ್ಕೆ ಋಣಿಯಾದ್ದರಿಂದ ಸಮಾನಾಂತರ ವಿಚಾರಗಳಿದ್ದರೂ ವಿಷಯದ ನಿರ್ವಹಣೆ ಹಾಗೂ ಕಾವ್ಯಾತ್ಮಕ ರೀತಿಯ ವಿಸ್ತರಣೆಯಲ್ಲಿ ಆತ ಸ್ವೋಪಜ್ಞನೆನಿಸಿ, ನಾಟಕೀಯ ಪರಿಣಾಮವನ್ನು ತನ್ನ ಕೃತಿಗೆ ತಂದುದಾಗಿ ಉಪಾಧ್ಯೆ ವಿಮರ್ಶಿಸುತ್ತಾರೆ. ಅವರ ಪ್ರಸ್ತಾವನೆಯ ಮಹತ್ವದ ಭಾಗವೆಂದರೆ *ಕಂಸವಹೋ*ದ ಪ್ರಾಕೃತ ಉಪಭಾಷೆಯ ಸ್ವರೂಪ ನಿರ್ಣಯ.

ಪ್ರಾಕೃತ ಸಾಹಿತ್ಯದ ಕಡೆಯ ಘಟ್ಟದ ಕವಿ ಈತ ಎಂಬುದನ್ನು ಕೃತಿಯ ಭಾಷಿಕ ವಿವೇಚನೆಯಲ್ಲಿ ಅವರು ಗಮನದಲ್ಲಿ ಇಟ್ಟುಕೊಂಡಿದ್ದಾರೆ. ಈತನ ಕೃತಿಯ ಪ್ರಾಕೃತವು ಶುದ್ಧವಾಗಿ ಸಾಹಿತ್ಯಕ ಭಾಷೆ. ರಾಮಪಾಣಿವಾದನು ಪ್ರಾಕೃತ ಕಾವ್ಯ, ವ್ಯಾಕರಣ, ಸಂಸ್ಕೃತವನ್ನು ಅಧ್ಯಯನ ಮಾಡಿದವ. ಆತನ ಕೃತಿರಚನೆಯ ಪರಿಸರವು ಪ್ರಾಕೃತದ ಆಡುಮಾತಿನ ಯಾವುದೇ ಪ್ರಭಾವವಿಲ್ಲದ ಪರಿಸರ. ಆದ್ದರಿಂದ ಕೃತಿಯ ಭಾಷೆಯ ದೀರ್ಘವ್ಯಾಕರಣಾತ್ಮಕ ವಿಶ್ಲೇಷಣೆ ಅನಗತ್ಯವೆನಿಸಿ, ಭಾಷಿಕ ವೈಶಿಷ್ಟ್ಯಗಳನ್ನು ಮಾತ್ರ ಉಪಾಧ್ಯೆ ವಿವೇಚಿಸುತ್ತಾರೆ. ಸಂಸ್ಕೃತದಿಂದ ನೇರವಾಗಿ ರೂಪವ್ಯತ್ಯಯಗೊಂಡ ಪ್ರಾಕೃತ ಕ್ರಿಯಾರೂಪಗಳು

ಇಲ್ಲಿದ್ದು, ಸಂಸ್ಕೃತ ಪ್ರಭಾವವುಳ್ಳ ಲೇಖಕರ ಬರಹದಲ್ಲಿದು ಸರ್ವೇ ಸಾಮಾನ್ಯ ಎಂದು ಉಪಾಧ್ಯೆ ತಿಳಿಯುತ್ತಾರೆ. ಪ್ರಾಚೀನ ಪ್ರಾಕೃತ ಸಾಹಿತ್ಯದಲ್ಲಿಲ್ಲದ, ಆತನದೇ ಆದ ಕೆಲ ಶಬ್ದ ರೂಪಗಳನ್ನು ಉಪಾಧ್ಯೆ ಗುರುತಿಸುತ್ತಾರೆ : ಸಂಸ್ಕೃತದ 'ಕಮನೀಯ'ದ ಹ್ರಸ್ವ ರೂಪ 'ಕಮಣಿ'ಯಾಗಿ, 'ಶೃಂಖಲಾ'-'ಸಿಂಖರಾ', 'ಶಾಲ್ಮಲಿ'-'ಸಾಮರಿ', 'ಫಲಕ'-'ಫರಕ'ವಾಗಿ ರಾಮಪಾಣಿವಾದನಲ್ಲಿ ಬಳಕೆಯಾಗಿದೆ.

ಕೆಲವೊಮ್ಮೆ ಇಡೀ ವಾಕ್ಯವನ್ನೋ ಪದಸರಣಿಯನ್ನೋ ಸಂಸ್ಕೃತದಲ್ಲಿ ಪರಿಭಾವಿಸಿ ನಂತರ ಪ್ರಾಕೃತಕ್ಕಳವಡಿಸುವಾಗ ವ್ಯಾಕರಣದ ಉಲ್ಲಂಘನೆಯಾಗುತ್ತದೆ. ಇದಕ್ಕೆ ಉಪಾಧ್ಯೆ ಉದಾಹರಣೆ ನೀಡುತ್ತಾರೆ. ಸ್ವಜನ- ಸಅಣ ಎಂಬ ಪ್ರಾಕೃತ ರೂಪಧಾರಣೆ ಮಾಡಿದಾಗ ಇಡಿಯಾಗಿ ಬಳಕೆಯಾದರೆ ಅಡ್ಡಿಯಿಲ್ಲ. ಆದರೆ ಜನ ಪದಕ್ಕೆ ಅಣ ಎಂದು ಬಳಸುವುದು ಸರಿಯಾಗದು. ಇಂಥ ಪದರೂಪಗಳನ್ನು ರಾಮಪಾಣಿವಾದನೊಂದಿಗೆ ಅನೇಕ ಪ್ರಾಕೃತ ಕವಿಗಳು ಬಳಸಿದ್ದಾರೆ. ಅಂಥ ರೂಪಗಳನ್ನು asterisk ಚಿಹ್ನೆಯಿಂದ ಗುರುತಿಸಿ, ಪ್ರಾಸದ ಅವಶ್ಯಕತೆಗಾಗಿ ಅವುಗಳ ಬಳಕೆಯಾಗಿರಬಹುದೆಂದು ಉಪಾಧ್ಯೆ ತೀರ್ಮಾನಿಸುತ್ತಾರೆ.

ಸಂಸ್ಕೃತದಿಂದ ಪ್ರಾಕೃತ ತದ್ಭವಗಳು ಬಂದಿರುವುದನ್ನು ಆಧರಿಸಿ ಪ್ರಾಕೃತ ವ್ಯಾಕರಣಕಾರರು ಕೆಲವು ನಿಯಮಗಳನ್ನು ಮಾಡುತ್ತಾರೆ. ಅನಂತರ ಸಂಸ್ಕೃತ ಪದಗಳನ್ನು ಪ್ರಾಕೃತಕ್ಕೆ ಬದಲಾಯಿಸಲು ಈ ನಿಯಮಗಳು ಬಳಕೆಯಾಗುತ್ತವೆ. ಈ ವಿದ್ಯಮಾನವು ಪ್ರಾಕೃತ ಸಾಹಿತ್ಯ ಭಾಷೆ ಸಿದ್ಧಗೊಳ್ಳಲು ಕಾರಣವಾಗುತ್ತವೆ. ಸಾಹಿತ್ಯ ಭಾಷೆ ವಿಕಾಸಗೊಳ್ಳುವ ಈ ಪರಿಯನ್ನು 'Kanarese words in Desi Lexicons' ಲೇಖನವು ವಿಸ್ತಾರವಾಗಿ ಚರ್ಚಿಸುತ್ತದೆ. ಪ್ರಾಕೃತ

ಶಬ್ದಕೋಶವನ್ನು ಪ್ರಾಕೃತ ವ್ಯಾಕರಣಕಾರರು ತತ್ಸಮ, ತದ್ಭವ ಹಾಗೂ ದೇಶ್ಯವೆಂದು ವಿಭಾಗಿಸುತ್ತಾರೆ. ಅಭಿಜಾತ ಸಂಸ್ಕೃತದಿಂದಲೇ ಈ ಪ್ರಾಕೃತ ರೂಪಗಳು ಸಿದ್ಧಿಸಿವೆ ಎಂಬ ಪೂರ್ವಗ್ರಹ ಇವರಲ್ಲಿದೆ ಎಂದು ಉಪಾಧ್ಯೆ ಹೇಳುತ್ತಾರೆ. ತದ್ಭವ ರೂಪಗಳೆಡೆ ವ್ಯಾಕರಣಕಾರರು ಗಮನ ಕೊಟ್ಟರು. ಸಮಕಾಲೀನದಲ್ಲಿ ಲಬ್ಧವಾಗಿದ್ದ ಪ್ರಾಕೃತ ಸಾಹಿತ್ಯವನ್ನು ಕೂಲಂಕಷವಾಗಿ ವಿಶ್ಲೇಷಿಸಿ ಅಲ್ಲಿ ಕಂಡು ಬರುವ ಕ್ರಮ ವ್ಯತ್ಯಯಗಳನ್ನು ಗುರುತಿಸಿ, ಕೆಲವೊಮ್ಮೆ ಪದರೂಪದ ವಿವರಣೆ ಕೊಡಲೆಂದೇ ನಿಯಮಗಳನ್ನು ವ್ಯಾಕರಣಕಾರ ಹೇಮಚಂದ್ರ ಸೃಷ್ಟಿಸಿದ. ಆಧುನಿಕ ಆಡುಭಾಷೆಗಳ ಅಧ್ಯಯನಕ್ಕೆ ಈತ ಒದಗಿಸುವ ತದ್ಭವಗಳ ಕುರಿತ ಸಾಮಗ್ರಿ ಉಪಯುಕ್ತವೆಂದು ಉಪಾಧ್ಯೆ ಭಾವಿಸುತ್ತಾರೆ. ಸಂಸ್ಕೃತದೊಂದಿಗೆ ಧ್ವನ್ಯಾತ್ಮಕವಾಗಿಯಾಗಲೀ ಯಾವುದೇ ರೀತಿಯ ಸಂಬಂಧವಿಲ್ಲದ ರೂಪಗಳನ್ನು ಪ್ರತ್ಯೇಕವಾಗಿ ಹೊರಗಿಟ್ಟರೂ ಅಭಿಜಾತ ಲೇಖಕರ ಕೃತಿಗಳ ಬಳಕೆಯ ಮೂಲಕ ಆ ಪದಗಳು ಪರಿಚಿತವೇ ಆಗಿದ್ದವು. ಹೇಮಚಂದ್ರ ಅವುಗಳನ್ನು ದೇಶೀ ನಾಮಮಾಲೆಯಲ್ಲಿ ಸೇರಿಸುತ್ತಾನಾದರೂ ತನ್ನ ವ್ಯಾಕರಣದಲ್ಲಿ ಅವುಗಳಿಗೆ ಮಾನ್ಯತೆ ನೀಡಲಿಲ್ಲ. ಕನ್ನಡದಿಂದ ಪಡೆದುಕೊಂಡಿರಬಹುದಾದುದು ಎನಿಸುವ ಕೆಲವು ದೇಸೀ ನಿಘಂಟಿನಲ್ಲಿದ್ದ ದೇಸಿ ಪದಗಳ ವಿಮರ್ಶಾತ್ಮಕ ವಿವೇಚನೆಯನ್ನು ಉಪಾಧ್ಯೆ ಕೈಗೊಳ್ಳುತ್ತಾರೆ.

ಈ ಸಂದರ್ಭದಲ್ಲಿ ಪ್ರಾಕೃತ ಮತ್ತು ಕನ್ನಡ ಶಬ್ದ ಸಂಪತ್ತಿನ ನಡುವಿನ ಸಂಬಂಧದ ಬಗ್ಗೆ ಅವರು ನೀಡಿರುವ ಮಹತ್ವದ ವಿಚಾರಗಳನ್ನು ಗಮನಿಸಬಹುದು. ನೃಪತುಂಗನ ಕಾಲಕ್ಕಾಗಲೇ ಗೋದಾವರಿಯವರೆಗೆ ವಿಸ್ತರಿತವಾದ ಕನ್ನಡ ಆಳ್ವಿಕೆಯ ಪ್ರಾಂತ್ಯವು

ಕನ್ನಡ ಭಾಷೆಯ ಪ್ರಾದೇಶಿಕ ಪ್ರಸಾರದ ಸೂಚಕವೂ ಆಗಿದೆ ಎಂದು ಉಪಾಧ್ಯೆ ಭಾವಿಸುತ್ತಾರೆ. ಜೈನ ಶೌರಸೇನಿಯಲ್ಲಿನ ಪ್ರಾಕೃತ ಸಾಹಿತ್ಯವು ದಕ್ಷಿಣ ಭಾರತದಲ್ಲಿ ತನ್ನದೇ ಆದ ಚಾರಿತ್ರಿಕ ಬೆಳವಣಿಗೆಯನ್ನು ಹೊಂದಿತ್ತು. ಪ್ರಾಕೃತದ ದಕ್ಷಿಣ ಭಾರತೀಯ ಲೇಖಕರಾದ ನೇಮಿಚಂದ್ರ, ದೇವಸೇನಾದಿಗಳ ಮಾತೃಭಾಷೆ ಕನ್ನಡವೇ. ಕನ್ನಡಿಗರೇ ಆದ ಕುಂದಕುಂದರು ಪ್ರಾಕೃತ, ತಮಿಳಿನಲ್ಲಿ ಬರೆಯಬಲ್ಲವರಾಗಿದ್ದರು. ಹೀಗಾಗಿ ಪ್ರಾಕೃತ ಶಾಬ್ದಿಕ ಬಳಕೆಯು ಕನ್ನಡದ ಪ್ರಭಾವ ಪಡೆಯುವುದು ಅನಿವಾರ್ಯವೇ ಆಗಿತ್ತು. ಕ್ರಿಸ್ತಶಕದ ಪೂರ್ವಾರ್ಧದ ಹೊತ್ತಿಗೆ ಜೈನರು ಆಡುಭಾಷೆಯಾಗಿದ್ದ ಕನ್ನಡವನ್ನು ಧಾರ್ಮಿಕ ವಿಚಾರಗಳ ಸಂವಹನಕ್ಕೆ ಬಳಸತೊಡಗಿದ್ದರು. ಈ ಪ್ರಾದೇಶಿಕ ಭಾಷೆಯ ಬಳಿಕ ಧಾರ್ಮಿಕ ವಿಚಾರಗಳ ವಾಹಕವಾಗಲು ಪೂರ್ಣಪ್ರಮಾಣದಲ್ಲಿ ಸಾಧ್ಯವಾಗದಾದಾಗ ಅದನ್ನು ತಮ್ಮ ಉದ್ದೇಶಗಳಿಗೆ ಬಳಸಿಕೊಳ್ಳಲು ಸಂಸ್ಕೃತದ ಅವಲಂಬನೆ ಪಡೆದರು. ಸಂಸ್ಕೃತ ಶಬ್ದರೂಪಗಳು ಕನ್ನಡದ ಧ್ವನಿವ್ಯವಸ್ಥೆಗೆ ಸರಿಹೊಂದದಾದಾಗ ಪ್ರಾಕೃತ-ವ್ಯಾಕರಣ ನಿಯಮವನ್ನನುಸರಿಸಿ ಕೆಲ ಅವಶ್ಯಕ ಅಪಭ್ರಷ್ಟ (Corrupt) ರೂಪಗಳನ್ನು ಕನ್ನಡದ ಶಬ್ದ ಭಂಡಾರಕ್ಕೆ ತಂದರು. ಕನ್ನಡ ಶಬ್ದ ಭಂಡಾರದ ಬೆಳವಣಿಗೆಯ ಮೇಲೆ ಪ್ರಾಕೃತ ಪ್ರಭಾವ ಬೀರಿರುವುದೇ ಪ್ರತ್ಯೇಕ ಅಧ್ಯಯನವಾಗಬಲ್ಲದೆಂದು ಉಪಾಧ್ಯೆ ಹೇಳುತ್ತಾರೆ. ಹೀಗಾಗಿ ಕನ್ನಡ ಶಬ್ದ ಭಂಡಾರವು ಪ್ರಾಕೃತಕ್ಕೆ ಋಣಿಯಾಗಿದ್ದು, ಕರ್ನಾಟಕದಿಂದ ಬಂದ ಪ್ರಾಕೃತ ಬರಹಗಾರರಿಗೆ ತನ್ನಲ್ಲಿನ ಕೆಲ ಶಬ್ದಗಳನ್ನು ಬಳಕೆಗೆ ನೀಡಿದೆ. ಅಂತಹ ಸುಮಾರು ೩೯ ಶಬ್ದಗಳನ್ನು ಅವರು ಪರಿಚಯಿಸುತ್ತಾರೆ. ಪ್ರಾಕೃತ ಭಾಷೆಯ ವಿಕಾಸದ ಇತಿಹಾಸಕ್ಕೆ ಉಪಾಧ್ಯೆ ನೀಡಿರುವ ಕಾಣಿಕೆ

ಅಮೂಲ್ಯವಾದುದು. ಪ್ರಾಕೃತ ಪದಬಳಕೆ ಹಲವು ಅರ್ಥಗಳಲ್ಲಿರುವುದನ್ನು ಅವರು '*ಕಂಸವಹೋ*' ದ ಪ್ರಾಕೃತ ಸ್ವರೂಪ ವಿವೇಚನೆ ಸಂದರ್ಭದಲ್ಲಿ ವಿವರಿಸುತ್ತಾರೆ. Middle Indo-Aryan ಸಾಹಿತ್ಯಿಕ ಭಾಷೆಗಳಿಗೆ ನೀಡಲಾಗಿರುವ ಭಾಷಾ ಪ್ರಕಾರದ ಹೆಸರು ಅದು. ಈ ಅರ್ಥದಲ್ಲಿ ಮಾಗಧೀ, ಶೌರಸೇನೀ, ಮಹಾರಾಷ್ಟ್ರೀ ಇವು ಪ್ರಾದೇಶಿಕ ಬಳಕೆಯ ಸೂಚಕಗಳು. ವರರುಚಿಯ ಹೊತ್ತಿಗಾಗಲೇ ಇವು ಯಾಂತ್ರೀಕೃತ ಮಾದರಿಗೊಳಗಾಗಿ ಸಾಹಿತ್ಯಕ ಭಾಷೆಗಳಾಗಿದ್ದವು. ಜೀವಂತ ಭಾಷೆಯ ಸಂಪರ್ಕವಿಲ್ಲದ ಪ್ರಾಕೃತ ಲೇಖಕರು ವ್ಯಾಕರಣಾತ್ಮಕ ಸೂತ್ರಗಳನ್ನಾಧರಿಸಿದ ಬಳಕೆಯನ್ನು ಮಾಡತೊಡಗಿದ್ದರು. ಇಂಥ ಸಾಹಿತ್ಯಕ ಬಳಕೆ ತನ್ನದೇ ಆದ ಅನುಕೂಲ, ಪ್ರತಿಕೂಲಕರ ಪರಿಣಾಮ ಹೊಂದಿತ್ತು. ಆ ಭಾಷೆಗಳು ಪ್ರಮಾಣ ರೂಪಧಾರಣೆ ಮಾಡಿ ಪ್ರತಿಷ್ಠಿತ ರೂಪ ಪಡೆದವು. ಅದರೊಂದಿಗೇ ಜನಸಾಮಾನ್ಯರ ಆಡುಮಾತಿನಲ್ಲಿ ತಮ್ಮದೇ ಆದ ಬಗೆಯಲ್ಲಿ ವಿಕಾಸಹೊಂದುತ್ತಲೋ ನಶಿಸುತ್ತಲೋ ಹೋಗುವ ಜೈವಿಕ ಸಂದರ್ಭದ ಸಂಪರ್ಕ ಕಳೆದುಕೊಂಡವು. ಕಾಲ, ಪ್ರದೇಶ, ಸಾಮಾಜಿಕ ಬಳಕೆಗಳು ಪ್ರತಿಬಂಧಕ ಗಡಿಗಳನ್ನು ನಿರ್ಮಿಸಿದ್ದರಿಂದ, ಇಂದು ಮಗಧದ ಆಡುಭಾಷೆಯ ನೈಜ ಮೂಲರೂಪವನ್ನು ಊಹೆಯೂ ಮಾಡಿಕೊಳ್ಳುವುದು ದುಸ್ತರವಾಗಿದೆ. ಈ ಹೊತ್ತಿನ ಉಪಭಾಷಿಕ ಅಧ್ಯಯನದ ಪರಿಭಾಷೆ, ವಿಧಾನವನ್ನನುಸರಿಸಿ ನೋಡುವುದಾದರೆ, ರಾಮಪಾಣಿವಾದನದು ಮಾಗಧಿ, ಶೌರಸೇನಿ ಅಥವಾ ಮಹಾರಾಷ್ಟ್ರೀಗಳ ಮಿಶ್ರಣವನ್ನು ಒಳಗೊಂಡ ಬರವಣಿಗೆ ಎಂದು ಉಪಾಧ್ಯೆ ನಿರ್ಧರಿಸುತ್ತಾರೆ. ಹಾಗಾಗಿ ಪ್ರಾಕೃತ ಸಾಹಿತ್ಯ, ವ್ಯಾಕರಣದ ಪ್ರಭಾವಕ್ಕೊಳಗಾದ ಕವಿಯಲ್ಲಿ ನಿರ್ದಿಷ್ಟ ಉಪಭಾಷಿಕ ಬಳಕೆಯ ವೈಶಿಷ್ಟ್ಯವನ್ನು ಕರಾರುವಕ್ಕಾಗಿ ಬಿಡಿಸಿ

ತೋರಿಸುವುದು ಕಷ್ಟವೆಂಬ ನಿರ್ಧಾರಕ್ಕೆ ಅವರು ಬರುತ್ತಾರೆ. ಇಷ್ಟಾಗಿ ಕೃತಿಯ ಆಂತರಿಕ ಸಾಕ್ಷ್ಯಾಧಾರಗಳಿಂದ ಪ್ರಾಕೃತ ನಾಟಕಗಳಲ್ಲಿ ಶೌರಸೇನಿ ಬಳಕೆ ಸಾಮಾನ್ಯವಾದ್ದರಿಂದ, ಪೂರ್ಣ ಶೌರಸೇನಿಯನ್ನು ಕಾಣಲಾಗದು ಎನ್ನುತ್ತಾರೆ. ವರರುಚಿಯ *ಪ್ರಾಕೃತ ಪ್ರಕಾಶ*ವನ್ನು ರಾಮಪಾಣಿವಾದ ಅನುಸರಿಸಿದ್ದಾನೆ. ಆ ವ್ಯಾಕರಣದ ಮೊದಲ ಒಂಬತ್ತು ಅಧ್ಯಾಯಗಳಲ್ಲಿ ಹೇಳಿರುವ ನಿಯಮಗಳನ್ನೇ ಮೂಲಭೂತವಾಗಿ ಈ ಭಾಷೆಯಲ್ಲಿ ಕಾಣಬಹುದು. ಆ ನಿಯಮಗಳು ಅನುಸರಿಸಿರುವ dialect ಮಹಾರಾಷ್ಟ್ರೀ ಆದುದರಿಂದ ಸಂಪ್ರದಾಯದಿಂದ ಬಂದ ಹೆಸರನ್ನು ಒಪ್ಪಿ ಆತನ ಕೃತಿಯ dialectನ್ನು ಮಹಾರಾಷ್ಟ್ರೀ ಪ್ರಾಕೃತವೆನ್ನಬಹುದಾಗಿದೆ ಎಂದು ನಿರ್ಣಯಿಸುತ್ತಾರೆ. ಪ್ರಾಕೃತ ಕೃತಿಗಳಿಗೆ ಛಾಯೆ ಅಗತ್ಯವಾಗಿದ್ದ ಕಾಲವಾದ್ದರಿಂದ ಸಂಸ್ಕೃತ ಛಾಯೆಯ ರಚಕ ರಾಮಪಾಣಿವಾದ ಎಂದು ಅವರು ನಿರ್ಧರಿಸುತ್ತಾರೆ.

* * * * *

ಡಾ. ಉಪಾಧ್ಯೆ ಅವರ ಮತ್ತೊಂದು ಸಂಪಾದಿತ ಕೃತಿ ಹರಿಷೇಣನ '*ಬೃಹತ್ಕಥಾಕೋಶ*'- ಮೂರು ಹಸ್ತಪ್ರತಿಗಳನ್ನು ಅವರು ಬಳಸಿಕೊಂಡಿದ್ದು, ಮೊದಲ ಸಲ ಪರಿಷ್ಕೃತಗೊಂಡು ಸಂಪಾದಿತವಾಗುತ್ತಿರುವ ಕಾರಣ ಹೆಚ್ಚು ಗ್ರಂಥಸಂಪಾದನಾ ರೂಢಿಗೆ ಬದ್ಧನಾಗಿ ಎಚ್ಚರಿಕೆಯಿಂದಿರುವುದಾಗಿ ಉಪಾಧ್ಯೆ ಹೇಳಿದ್ದಾರೆ. ಹಸ್ತಪ್ರತಿ ಸಾಮಗ್ರಿ ಬಳಸಿಕೊಳ್ಳುವಲ್ಲಿ ಅವರಿಗೆ ಕೆಲವು ತೊಡಕುಗಳು ಎದುರಾಗಿದೆ. ಕಥಾಸರಣಿಗೆ ಸರಿಹೊಂದದಂತೆ ಪದ್ಯ ಸಂಖ್ಯೆಯಲ್ಲಿ ಪಲ್ಲಟಗಳಾಗಿದ್ದು, ಕಥೆಗಳ ಅನುಕ್ರಮಣಿಕೆಯ ಸಂಖ್ಯೆಯನ್ನು ಖಚಿತವಾಗಿ ನಿರ್ಣಯಿಸಲು ತೊಡಕಾಗಿದೆ. ಒಬ್ಬ ಲಿಪಿಕಾರ ಕೆಲವು ಸಾಲುಗಳನ್ನೇ ಕಣ್ತಪ್ಪಿನಿಂದ ಬಿಟ್ಟಿದ್ದು, ತಪ್ಪಿನರಿವಾಗಿ ಮುಂದಿನ

ಹಾಳೆಯ ಅಂಚಿನಲ್ಲಿ ಬರೆದಿದ್ದನ್ನು ನಂತರದ ಪ್ರತಿಕಾರ ತಪ್ಪಾಗಿ ಸರಿಹೊಂದದ ಸ್ಥಳದಲ್ಲಿ ಸೇರಿಸಿಕೊಂಡುಬಿಟ್ಟಿದ್ದ. ಉಪಾಧ್ಯೆ ಅದನ್ನು ಗುರುತಿಸಿ ಸರಿಪಡಿಸುತ್ತಾರೆ.

*ಬೃಹತ್ಕಥಾಕೋಶದ* ಅತ್ಯಂತ ಸುದೀರ್ಘ ಪ್ರಸ್ತಾವನೆಯ ಭಾಗವು ಕಥಾ ಸಾಹಿತ್ಯದ ಸ್ವರೂಪ, ವಿಕಾಸದ ಇತಿಹಾಸವನ್ನು ಆಳವಾಗಿ ಚರ್ಚಿಸುತ್ತದೆ. ವೇದೋತ್ತರ ಭಾರತೀಯ ಸಾಹಿತ್ಯದ ಮುಖ್ಯ ಕಥನಧಾರೆಗಳಾದ *ಮಹಾಭಾರತ, ರಾಮಾಯಣದೊಂದಿಗೆ ಬೃಹತ್ಕಥೆಯನ್ನು* ಉಪಾಧ್ಯೆ ಸೇರಿಸುತ್ತಾರೆ. ಗುಣಾಢ್ಯನ ಪೈಶಾಚೀ ಪ್ರಾಕೃತದ ಮೂರು ಸಾರಾಂಶ ರೂಪಿಕೃತಿಗಳು ಸಂಸ್ಕೃತದಲ್ಲಿವೆ. ಈ ಪ್ರಸ್ತಾವನೆಯ ಉಪಯುಕ್ತ ಭಾಗವೆಂದರೆ, ವೇದಕಾಲೀನ ಚಿಂತನೆಯ ಧಾರೆಗಿಂತ ಭಿನ್ನವಾದ ಚಿಂತನ ಧಾರೆಯನ್ನು Magadhan religion' ಎಂದು ಅವರು ಹೆಸರಿಸುತ್ತಾರೆ. ಈ ಸಂಬಂಧವಾಗಿ ಅವರ ಆಲೋಚನೆ ಇಂತಿದೆ :

ಆರ್ಯರ ಆಗಮನಕ್ಕಿಂತ ಪೂರ್ವದಲ್ಲಿಯೇ ಗಂಗಾ-ಯಮುನಾ ತಟದಲ್ಲಿ ಸಮೃದ್ಧ ಸಮಾಜ, ಸಂಸ್ಕೃತಿ ನೆಲೆಸಿತ್ತು. ಅದರದೇ ಆದ ಧಾರ್ಮಿಕ ನಾಯಕರು ಇದ್ದರು. ಜೈನ, ಬೌದ್ಧಧರ್ಮಗಳು ನೆಲೆಸಿದ್ದ ಮಗಧ ದೇಶದ ಬಗ್ಗೆ ವೇದ ಪಠ್ಯಗಳಲ್ಲಿ ಅಸಹನೆ ಇದೆ. ಈ ಧರ್ಮಗಳು ವೇದಾಧಿಕಾರಕ್ಕೆ ತಲೆಬಾಗಿರಲಿಲ್ಲ. ಉಪನಿಷತ್ ಕಾಲಘಟ್ಟದಲ್ಲಿ ಜನ್ಮಾಂತರ, ಕರ್ಮಸಿದ್ಧಾಂತದಂಥ ಹೊಸ ಆಲೋಚನೆಗಳು ಮೂಡಿದವು. ಆತ್ಮವಾದೀ ವೈರಾಗ್ಯಪರ ಪಂಥವು ಯಜ್ಞಬಲಿಯನ್ನು, ಪುರೋಹಿತ ಅಧಿಕಾರವನ್ನು ಮಾನ್ಯ ಮಾಡಲಿಲ್ಲ.

ಬ್ರಾಹ್ಮಣಗಳ ಅಂತಿಮ ಕಾಲದಲ್ಲಿ ಕಂಡು ಬರುವ ತಾತ್ವಿಕ ಚಿಂತನೆಯ ಕಂದರವು ಸ್ವೋಪಜ್ಞ ಧಾರ್ಮಿಕ ಚಿಂತನೆ ರೂಪಿಸಿಕೊಳ್ಳಲು ಕಾರಣವಾಯ್ತು. ವೇದಗಳ ಪ್ರಭಾವ ಅಲ್ಪಸ್ವಲ್ಪ ಇವುಗಳ ಮೇಲೂ ಇವುಗಳ ಪ್ರಭಾವ ಆರ್ಯ ಚಿಂತನೆಗಳ ಮೇಲೂ ಆದವು. ಹರ್ಮನ್ ಯಾಕೋಬಿ ಈ ಸ್ವೋಪಜ್ಞ ಧರ್ಮವನ್ನು Popular religion ಎಂದು ಕರೆದು ಇದರ ಅನುಯಾಯಿಗಳನ್ನು ಪರಿವ್ರಾಜಕ, ಕ್ಷತ್ರಿಯ ಎಂದು ಕರೆದ. ಉಪಾಧ್ಯೆ ಇದನ್ನು ಮಗಧೀಯಧರ್ಮ ಎಂದು ಕರೆದರು. ಜೈನ, ಬೌದ್ಧ, ಆಜೀವಕ, ಸಾಂಖ್ಯರನ್ನು ಉಪನಿಷತ್ತಿನ ಆರ್ಯ ಚಿಂತನಾಧಾರೆಯೊಳಗಿನ ಬಿಡಿ ಚಿಂತನೆಗಳೆಂದು ಸ್ವೀಕರಿಸಲು ಉಪಾಧ್ಯೆ ಸಿದ್ಧರಿಲ್ಲ. ಅವರು ಈ ಮಗಧ ಧರ್ಮದ ಸ್ವಂತಿಕೆ, ವೈಶಿಷ್ಟ್ಯವನ್ನು ಗುರುತಿಸಿ ಪ್ರತಿಪಾದಿಸುತ್ತಾರೆ. ಸೃಷ್ಟಿಕರ್ತ ದೇವನ ನಿರಾಕರಣೆ, ಸನ್ಯಾಸದತ್ತ ಒಲವು, ಜನ್ಮಾಂತರ ವಾದ, ಕರ್ಮಸಿದ್ಧಾಂತ, ಮಾನವೀಯ ನೀತಿಸಂಹಿತೆ ಇತ್ಯಾದಿಗಳು ಈ ವೈಶಿಷ್ಟ್ಯಗಳು. ಆ ಮೂಲಕ ಭಾರತೀಯ ಧಾರ್ಮಿಕ ತಾತ್ವಿಕ ಚಿಂತನೆಯ ವಿಕಾಸಪಥದಲ್ಲಿ ಜೈನಧರ್ಮದ ಸ್ಥಾನವನ್ನು ತಿಳಿಸಲೆತ್ನಿಸುತ್ತಾರೆ. ಜೈನ, ಬೌದ್ಧ, ಸಾಂಖ್ಯ ಈ ಮೂರೂ ವೇದ ನಿರಾಕರಣೆ ಮಾಡಿದವು. ವೈಯಕ್ತಿಕ ಲಾಭಕ್ಕಾಗಲೀ, ಯಜ್ಞದ ಉದ್ದೇಶಕ್ಕಾಗಿಯಾಗಲೀ ಹಿಂಸೆ ನಡೆಯುವುದನ್ನು ಈ ಮೂರು ಪಂಥಗಳು ನಿರಾಕರಿಸುತ್ತವೆ.

ಹೀಗೆ ಜೈನ ಚಿಂತನಾ ಧಾರೆಯನ್ನು ಉಪಾಧ್ಯೆಯವರು ಪರಿಚಯಿಸುತ್ತ ಶ್ರಮಣ ಪರಂಪರೆಯ ಕಥೆ, ಐತಿಹ್ಯಗಳು, ಸನ್ಯಾಸಿ, ತೀರ್ಥಂಕರರು ಹಾಗೂ ಧಾರ್ಮಿಕ ಬದುಕಿಗಾಗಿ ತಹತಹಿಸುವವರನ್ನು ಅದು ಕೇಂದ್ರವಾಗಿಟ್ಟುಕೊಂಡಿದೆ ಎನ್ನುತ್ತಾರೆ. ಕರ್ಮಸಿದ್ಧಾಂತ ಹಾಗೂ ಜನ್ಮಾಂತರವಾದದ ಮೇಲಿನ ನಂಬಿಕೆಯನ್ನು ಆಧರಿಸಿ ಮುನಿಜೀವನದ

ನೈತಿಕತೆ ನಿಂತಿದೆ. ಈ ಚಿಂತನೆಗಳು ಮಹಾಭಾರತವನ್ನು ಪ್ರಭಾವ ಗೊಳಿಸಿವೆ. ಬೋಧಿಸತ್ವನ ತತ್ತ್ವಜ್ಞಾನದ ಜೊತೆಗೂಡಿಕೊಂಡ ಕರ್ಮಸಿದ್ಧಾಂತ, ಜನ್ಮಾಂತರವಾದಗಳ ಮೂಲಕ ಯಾವುದೇ ಕತೆಯನ್ನಾದರೂ ಜಾತಕಕತೆಯಾಗಿ ಮಾರ್ಪಡಿಸಬಹುದೆಂದು ಬೌದ್ಧ ಕಥಾ ಸಾಹಿತ್ಯ ಸ್ವರೂಪವನ್ನು ಉಪಾಧ್ಯೆ ವಿವೇಚಿಸುತ್ತಾರೆ. ಭಾರತೀಯ ಜನಪದ ಸಾಹಿತ್ಯದಿಂದ ಪಡೆದ ಅನೇಕ ಕತೆಗಳನ್ನು ವಿವಿಧ ಧರ್ಮಗಳನ್ನು ತಮ್ಮದೇ ಆದ ರೀತಿಯಲ್ಲಿ ಬಳಸಿಕೊಂಡದ್ದನ್ನು ಉಪಾಧ್ಯೆ ಪರಿಚಯಿಸುತ್ತಾರೆ.

ಜೈನ ಕಥಾ ಪರಂಪರೆಯ ವಿಕಾಸವನ್ನು ಕುರಿತ ಅವರ ವಾದ ಇಂತಿದೆ : ಮೂಲದಲ್ಲಿ ಇವು ಸರಳ ಉಪಮೆ (Simili) ಗಳಾಗಿದ್ದು ಸಂಗತಿಗಳನ್ನು ಕಥನರೂಪಕ್ಕೆ ಅಳವಡಿಸಿ ಜೈನ ಧಾರ್ಮಿಕ ಲಕ್ಷಣಗಳನ್ನು ರೂಪಿಸಿಕೊಳ್ಳಲಾಯ್ತು. ಹೀಗೆ ಉಪಮಾ ಮೂಲಕತೆಗಳು ಸಾಕಷ್ಟು ವಿವರಗಳನ್ನು ಸೇರಿಕೊಳ್ಳುತ್ತಾ ಧಾರ್ಮಿಕ ಶ್ರದ್ಧಾವಂತರಿಗಾಗಿ ಉಪದೇಶಾತ್ಮಕ ಕತೆಗಳಾಗಿ ಮಾರ್ಪಾಡಾದವು. ತಮೆ, ಸೋರೆಬುರುಡೆ, ನಂದಿವೃಕ್ಷ ಮುಂತಾದವು ಅಂತಹ ಕೆಲವು ಉಪಮೆಗಳು. ಇಂಥ ರೂಪಕ ಕತೆಯನ್ನು ಉಪಾಧ್ಯೆ ಅತ್ಯಂತ ಸ್ವಾರಸ್ಯಕರವಾಗಿ ವಿಮರ್ಶಿಸುತ್ತಾರೆ. ಐದು ಕಮಲಗಳುಳ್ಳ ಸರೋವರದ ತೆ ಜೈನ ಧಾರ್ಮಿಕ ಕಥಾಪರಂಪರೆಯಲ್ಲಿದೆ. ಜೈನ ಮುನಿಯೊಬ್ಬ ದಡದಲ್ಲೇ ನಿಂತು ಸರೋವರದ ಮಧ್ಯದ ಕಮಲವನ್ನು ಮಂತ್ರದಿಂದ ಾಗೇ ಪಡೆದುಕೊಂಡ. ಈ ಕತೆಯು ಮುನಿಮಹಿಮೆಯನ್ನಷ್ಟೇ ೇಳುವುದಿಲ್ಲ. ಧರ್ಮವು ರಾಜಾಶ್ರಯದಿಂದ ಪೋಷಣೆ ಡೆಯುತ್ತಿದ್ದು ಉಳಿದ ಧರ್ಮಗಳೊಂದಿಗೆ ಸ್ಪರ್ಧೆಗೆ ಸಜ್ಜಾಗುತ್ತಿದ್ದ

ಸ್ಥಿತಿಯ ಸೂಚಕವಾಗಿ (*ಸೂತ್ರಕೃತಾಂಗ*) '*ಸೂಯಗಡಂ ಅಂಗ*
ಗ್ರಂಥದ ಈ ಕತೆ ನಿಂತಿದೆ.

'*ನಾಯಧಮ್ಮ ಕಹಾ*'ದಲ್ಲಿ ನಾಲ್ಕು ಜನ ಸೊಸೆಯರ ಕ
ಬರುತ್ತದೆ. ಮಾವ ಅವರ ಸಾಮರ್ಥ್ಯ, ಸ್ವಭಾವ ಪರೀಕ್ಷಿಸಲ
ಪ್ರತಿಯೊಬ್ಬರಿಗೂ ಐದೈದು ಬತ್ತದ ಕಾಳನ್ನು ಕೊಡುತ್ತಾನೆ
ಮೊದಲನೆಯವಳು ಎಸೆದು ಬಿಡುತ್ತಾಳೆ. ಎರಡನೆಯವಳು ತಿನ್ನುತ್ತಾಳ
ಮೂರನೆಯವಳು ಆಭರಣ ಪೆಟ್ಟಿಗೆಯಲ್ಲಿ ಬಚ್ಚಿಡುತ್ತಾಳ
ನಾಲ್ಕನೆಯವಳು ಮಣ್ಣಲ್ಲಿ ಬಿತ್ತಿ ಬೆಳೆ ಬೆಳೆಯುತ್ತಾಳೆ. ಈ ಕ
ವ್ರತಗಳನ್ನು ಮುನಿಗಳು ಪಾಲಿಸುವಲ್ಲಿನ ತರತಮಗಳ ಸೂಚಕ.

ಅರ್ಧಮಾಗಧಿಯ ಜೈನ ಧಾರ್ಮಿಕ ಪ್ರಮಾಣ ಗ್ರಂಥಗಳಲ್ಲಿ
ಕಥನಗಳ ಪಕ್ಷಿನೋಟವನ್ನು ದೀರ್ಘವಾಗಿ ಉಪಾಧ್ಯೆ ನೀಡುತ್ತಾರ
ನೇಮಿ, ಪಾರ್ಶ್ವ, ಮಹಾವೀರ ತೀರ್ಥಂಕರರಿಗೆ ಸಂಬಂಧಿಸಿ
ಐತಿಹ್ಯಕತೆಗಳ ಪರಿಚಯ ಇಲ್ಲಿದೆ. ಈ ಕಥಾ ಸಾಹಿತ್ಯದಲ್ಲಿ ಪ್ರಮು
ಸ್ಥಾನ ಹೊಂದಿದ ಶಿವಕೋಟ್ಯಾಚಾರ್ಯನ *ಭಗವತೀ ಆರಾಧನಾ* ಕುರಿ
ವಿಸ್ತೃತ ವಿವರಣೆಯಿದೆ. *ಭಗವತೀ ಆರಾಧನೆ*ಯ ಪ್ರಾಚೀನತೆಯ
ಜಿನಸೇನರ *ಆದಿಪುರಾಣ*ಕ್ಕಿಂತ ಹಿಂದಿನದು. ಕುಂದಕುಂದರಿಗಿಂ
ಶಿವಕೋಟ್ಯಾಚಾರ್ಯ ಹಿರಿಯ ಎಂದು ಹೇಳಬಹುದಾದರೂ ಹೆಚ್ಚಿ
ಸಂಶೋಧನೆಗೆ ಇನ್ನೂ ಕಾಯಬೇಕೆಂಬ ತೀರ್ಮಾನ ಅವರದು.

ಇನ್ನು, ಹರಿಷೇಣನ *ಬೃಹತ್ಕಥಾಕೋಶ*ಕ್ಕೆ ಸನ್ಯಾಸಿ ಜೀವನ
ಆದರ್ಶ ಎತ್ತಿ ಹಿಡಿವ ಅಪೇಕ್ಷೆ ಇದ್ದರೂ "the Kosha is no
altogether devoid of sclar interest" ಎಂದಿದ್ದಾರೆ. ಲೌಕಿ
ಜ್ಞಾನ, ಮನರಂಜನೆ ಉದ್ದೇಶವುಳ್ಳ ಕತೆಗಳೂ ಇಲ್ಲಿ ಹರಡಿ

ಎನ್ನುವುದರತ್ತ ನಮ್ಮ ಗಮನವನ್ನು ಅವರು ಸೆಳೆಯುತ್ತಾರೆ. ಪೌರಾಣಿಕದೇವತೆಗಳು, ಯಜ್ಞ, ಪುರೋಹಿತ ಆಚರಣೆಗಳ ಖಂಡನೆ ಇಲ್ಲಿರುವುದರಿಂದ ಶ್ರಮಣ ಪರಂಪರೆಯ ಚಿಂತನ ಧಾರೆಯ ಸ್ಪಷ್ಟ ಅಭಿವ್ಯಕ್ತಿಯಾಗಿ ನಿಂತ ಈ ಕೃತಿಯ ಮಹತ್ವವನ್ನು ಉಪಾಧ್ಯೆ ಎತ್ತಿ ಹಿಡಿಯುತ್ತಾರೆ. ಕರಕಂಡು, ಅರ್ಹದ್ದಾಸ, ಯಶೋಧರ-ಕತೆಗಳ ಆಶಯವು ನಂತರದ ಸಾಹಿತ್ಯದಲ್ಲಿ ಪಡೆದ ಸ್ವರೂಪದ ಅಧ್ಯಯನಕ್ಕೆ ಈ ಕೃತಿಯನ್ನು ಉಪಯುಕ್ತ ಆಕರವಾಗಿ ಅವರು ಪರಿಗಣಿಸುತ್ತಾರೆ. ಭಾರತದ ವಿವಿಧ ಕಾಲ, ಪ್ರದೇಶ, ಜನರ ಬದುಕಿನ ಜಾನಪದೀಯ ಅಧ್ಯಯನಕ್ಕೆ ಈ ಕೃತಿಯನ್ನು ಉಪಯುಕ್ತ ಆಕರವಾಗಿ ಅವರು ಪರಿಗಣಿಸುತ್ತಾರೆ. ಭಾರತದ ವಿವಿಧ ಕಾಲ, ಪ್ರದೇಶ, ಜನರ ಬದುಕಿನ ಜಾನಪದೀಯ ಅಧ್ಯಯನಕ್ಕೆ ಉಪಯುಕ್ತವಾಗಬಲ್ಲ ಈ ಕೃತಿಯ ಮಾಹಿತಿಗಳನ್ನು ಅವರು ನೀಡುತ್ತಾರೆ. ಪಾರಸಿಕ ಶ್ರೀಮಂತನೊಬ್ಬ ಟುಂಕಾರಿಕಾ ಎಂಬುವಳನ್ನು ಕೊಂಡು ಆರು ತಿಂಗಳ ಕಾಲ ಆಹಾರ ಪೋಷಣೆ ಒದಗಿಸಿ ಜಿಗಣೆಗಳಿಂದ ಅವಳ ರಕ್ತ ತೆಗಿಸಿ ಕ್ರಿಮಿರಾಗ ಕಂಬಳ ಹೆಸರಿನ ವಸ್ತ್ರಕ್ಕೆ ಕೆಂಪುಬಣ್ಣ ಕಟ್ಟಲು ಬಳಸಿದ ಉಲ್ಲೇಖವನ್ನು ಉಪಾಧ್ಯೆ ಉದಾಹರಿಸುತ್ತಾರೆ. ಆಶಾಧರನಲ್ಲೂ ರಕ್ತದಿಂದ ಬಣ್ಣ ಕಟ್ಟುವ ವಿಧಾನ ದಾಖಲಾಗಿದೆ. ಕಾಲವಿಭಜನೆ, ಹಾವುಗಳ ವಿವಿಧ ವರ್ಗ ಸ್ವರೂಪ, ಚರ್ಮದ ಉರಿಗೆ ಉಪಶಮನ ನೀಡಲು ಲಾಕ್ಷಾಪಾಕ ಎಂಬ ಎಣ್ಣೆಯ ಬಳಕೆ, ಕಪ್ಪುಬಣ್ಣದ ವಸ್ತ್ರ, ಕಪ್ಪು ಜೋಡೆತ್ತು, ಕಬ್ಬಿಣ ಸಾಧನಗಳನ್ನು ಕೊಟ್ಟು ವ್ಯಕ್ತಿಯ ಕುರಿತಾದ ಅಸಮಾಧಾನ ವ್ಯಕ್ತಪಡಿಸುವ ಪದ್ಧತಿಗಳನ್ನು ಉಪಾಧ್ಯೆ ಉದಾಹರಿಸುತ್ತಾರೆ. ಕೆಲ ಚಾರಿತ್ರಿಕ ಸಂಗತಿಗಳ ಉಲ್ಲೇಖ ಇಲ್ಲಿದ್ದು ಅದು ಕೃತಿಕಾರನ ಸಮಕಾಲೀನ ಚರಿತ್ರೆ ಎಂದು ಭಾವಿಸಲಾಗದೆಂಬ ಎಚ್ಚರಿಕೆಯನ್ನವರು

ವಹಿಸುತ್ತಾರೆ. ಏಕೆಂದರೆ ಅವು ಪರಂಪರೆಯಲ್ಲಿ ಬಂದಿದ್ದರ ದಾಖಲೆ ಕೂಡ ಆಗಿರುತ್ತವೆ. ಮಥುರೆಯಲ್ಲಿ ನಿರ್ಮಾಣವಾದ ಪಂಚಸ್ತೂಪದ ಕುರಿತಂತೆ ಉಲ್ಲೇಖವಿದೆ. ಅದರ ಬಗ್ಗೆ ತುರ್ತಾಗಿ ಸಂಶೋಧನೆ ನಡೆಸುವ ಅಗತ್ಯವಿದೆ ಎನ್ನುತ್ತಾರೆ.

* * * * *

ಕುತೂಹಲನ '*ಲೀಲಾವಈ ಕಹಾ*'ದ ಸಂಪಾದನೆಯ ಪ್ರಸ್ತಾವನೆಯಲ್ಲಿ ಇತರ ಕಥನಗಳೊಂದಿಗೆ ತೌಲನಿಕವಾಗಿ ಅಧ್ಯಯನ ನಡೆಸುವ ಸಂದರ್ಭದಲ್ಲಿ, ಕನ್ನಡ ನೇಮಿಚಂದ್ರ ಕೃತ *ಲೀಲಾವತೀ ಪ್ರಬಂಧ* ರಚನೆಗೆ ಕುತೂಹಲನ ಕೃತಿ ನೀಡಿರುವ ಪ್ರೇರಣೆಯನ್ನು ಉಪಾಧ್ಯೆ ಸ್ಥಾಪಿಸುತ್ತಾರೆ. ಮೂಲದ ಶೈವ ಪರಿಸರಕ್ಕೆ ಬದಲಾಗಿ ಕರ್ನಾಟಕದ ಪ್ರಾದೇಶಿಕತೆಯನ್ನು ಜೈನ ಧರ್ಮೀಯ ಹಿನ್ನೆಲೆಯನ್ನು ನೇಮಿಚಂದ್ರ ಒದಗಿಸಿರುವುದನ್ನು ಅವರು ಗಮನಿಸುತ್ತಾರೆ. ಕನ್ನಡದ ಚಂಪೂ ಕಾವ್ಯ ರಚನೆಗೆ ಪ್ರಾಕೃತದ *ಕುವಲಯಾಮಾಲಾ*ದಂಥ ರಚನೆ ಪ್ರಭಾವ ನೀಡಿದೆ ಎಂಬುದು ಉಪಾಧ್ಯೆಯವರ ಸಂಶೋಧನೆಯಿಂದ ಸಾಬೀತಾಗುತ್ತದೆ. ಅಸಗನ ಮೇಲಿನ ಲೇಖನ, *ಜೀವಂಧರ ಚಂಪೂ* (ಹರಿಚಂದ್ರ) ಕೃತಿಗೆ ಬರೆದ ಪ್ರಧಾನ ಸಂಪಾದಕೀಯಗಳು ಕನ್ನಡ ಕೃತಿಗಳೊಂದಿಗಿನ ತೌಲನಿಕ ಅಧ್ಯಯನಕ್ಕೆ ಪ್ರೇರಣೆ ನೀಡಿದೆ. ಜಟಾಸಿಂಹನಂದಿಯೇ *ವರಾಂಗಚರಿತ*ದ ಕರ್ತೃ ಎಂಬುದನ್ನು *ಚಾವುಂಡರಾಯ ಪುರಾಣ*ದ ಉದ್ಧೃತ ಪದ್ಯ ಹಾಗೂ ಜಟಾಸಿಂಹನಂದಿ ಹೆಸರಿನ ಉಲ್ಲೇಖದ ಮೂಲಕ ಉಪಾಧ್ಯೆ ಖಚಿತಪಡಿಸುತ್ತಾರೆ. ಕನ್ನಡ ಕವಿಗಳಲ್ಲಿ ಬರುವ ಜಟಾಸಿಂಹನಂದಿಯ ಉಲ್ಲೇಖಗಳ ವಿವರಗಳನ್ನು ಅವರು ನೀಡುತ್ತಾರೆ.

ಉಪಾಧ್ಯೆಯವರು ತಮ್ಮ ೪೫ ವರ್ಷಗಳ ಅಧ್ಯಾಪನ ಸಂಶೋಧನ ಅವಧಿಯಲ್ಲಿ ಬರೆದ ಲೇಖನಗಳನ್ನು ಸಮಗ್ರ ಗ್ರಂಥ ರೂಪದಲ್ಲಿ ಪ್ರಕಟಿಸುವ ಯೋಚನೆಯನ್ನು ಹಾಕಿಕೊಂಡಿದ್ದರು. ಉಪಾಧ್ಯೆ ಅವರ ನಿಧನಾನಂತರ ಗುಜರಾತಿನ ವಿಶ್ವವಿದ್ಯಾಲಯಕ್ಕೆ ಮಾರಾಟವಾದ ಅವರ ಗ್ರಂಥ ಭಂಡಾರದೊಂದಿಗೆ ಅವರು ಸಂಗ್ರಹಿಸಿ ಪ್ರಕಟಿಸಬಯಸಿದ ೧೮೫ ಲೇಖನಗಳೂ ಇದ್ದವು. 'Upadhye papers' ಹೆಸರಿನ ಸಂಗ್ರಹ ಗ್ರಂಥವು ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಯಿತು. ಅವರ ಬಿಡಿ ಲೇಖನಗಳು ಮೊದಲ ಬಾರಿಗೆ ಅನೇಕ ಸಂಶೋಧನ ಸತ್ಯಗಳನ್ನು ಸಾಧಾರವಾಗಿ ಹೊರತಂದಿವೆ. '*ಗೊಮ್ಮಟ*' ಶಬ್ದ ನಿಷ್ಪತ್ತಿಯನ್ನು ಕುರಿತಂತೆ, '*ಯಾಪನೀಯ*' ಸಂಘವನ್ನು ಕುರಿತಂತೆ ಬರೆದ ಲೇಖನಗಳು ಅನೇಕ ಸಂಶಯಗಳ ನಿವಾರಣೆ ಮಾಡುತ್ತವೆ. ಪ್ರಾಕೃತ ವ್ಯಾಕರಣಕಾರ ಶುಭಚಂದ್ರನನ್ನು ಇತರ ಬೇರೆ ಏಳು ಜನ ಶುಭಚಂದ್ರರಿಂದ ಪ್ರತ್ಯೇಕಿಸಿ 'Shubhachandra and his grammer' ಲೇಖನದಲ್ಲಿ ಕೃತಿಯ ಕರ್ತೃವನ್ನು ಖಚಿತಪಡಿಸಿದರು. ಅವರ ಹೆಚ್ಚಿನ ಲೇಖನಗಳು ಜೈನವಿದ್ಯೆ ಹಾಗೂ ಪ್ರಾಕೃತ ಭಾಷಾ ಸಾಹಿತ್ಯಕ್ಕೆ ಸಂಬಂಧಿಸಿದವು.

ಇನ್ನು, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಉಪಾಧ್ಯೆಯವರಿಂದ ಕನ್ನಡ ಸಾಹಿತ್ಯ ಸಂಶೋಧನೆಗೆ ಸಂದಿರುವ ಸೇವೆ ಕೂಡ ಗಣ್ಯವಾದುದು. ಕನ್ನಡ ವಡ್ಡಾರಾಧನೆ ಕುರಿತ ಅವರ ಸಂಶೋಧನೆ ಅತ್ಯಂತ ಉಪಯುಕ್ತವಾಗಿದೆ. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆಯ ೩ನೇ ಸಂಪುಟದಲ್ಲಿ ವಡ್ಡಾರಾಧನೆಯ ಹಿನ್ನೆಲೆ, ಕರ್ತೃತ್ವ ಕಾಲ ದೇಶ ವಿಚಾರ ಕುರಿತ ವಿವರಪೂರ್ಣ ಮಾಹಿತಿ ಇದೆ.

ಕನ್ನಡ ವಡ್ಡಾರಾಧನೆ ಕೃತಿಗೆ ಸಂಬಂಧಿಸಿದಂತೆ ಉಪಾಧ್ಯೆ ವಿಸ್ತಾರವಾದ, ವೈವಿಧ್ಯಮಯವಾದ ಸಾಮಗ್ರಿಯನ್ನು ಒದಗಿಸುತ್ತಾ ವಿವೇಚಿಸುತ್ತಾರೆ.

೧೮೮೩ರಲ್ಲಿ ಕೆ.ಬಿ. ಪಾಠಕ್ ಹಾಗೂ ಜಿ.ಎಫ್. ಫ್ಲೀಟ್ ಪಂಚಮಹಾಶಬ್ದ, ನಿಸಿಧಿ ಎಂಬ ಶಬ್ದಗಳ ವಿವರಣೆ ನೀಡುವ ಸಂದರ್ಭದಲ್ಲಿ Indian Antiquary ಯಲ್ಲಿ ವಡ್ಡಾರಾಧನೆಯ ಕೆಲ ಸಾಲುಗಳನ್ನು ಲೇಖನದಲ್ಲಿ ಪ್ರಕಟಿಸಿದರು. ಅವರು ಕೃತಿಕಾರ ರೇವಕೋಟ್ಯಾಚಾರ್ಯನೆಂದೂ, ಕೃತಿ *ಉಪಸರ್ಗ ಕೇವಲಿಗಳ ಕತೆ* ಎಂದೂ ಹೆಸರಿಸಿದ್ದರು. ಉಪಾಧ್ಯೆಯವರು ಫ್ಲೀಟ್‌ರಿಂದ ದೊರೆತ ಸೂಚನೆಯ ಮೇರೆಗೆ ಕೊಲ್ಲಾಪುರದ ಜೈನಮಠದಲ್ಲಿ ತಾಳೆಗರಿ ಪ್ರತಿಯನ್ನು ಹುಡುಕಿ ನೋಡಿ, ಕೃತಿಯ ಶೀರ್ಷಿಕೆಯು ಹೊರ ಪಟ್ಟಿಯ ಮೇಲೆ ವಾಚನಾಲಯದ ಮ್ಯಾನೇಜರ್ ಬರೆದ ಹೆಸರೆಂದು ತೀರ್ಮಾನಿಸಿದರು. ಕೃತಿಯಲ್ಲೆಲ್ಲೂ ಈ ಹೆಸರಿಲ್ಲದಿರುವುದನ್ನು ಅವರು ಗುರುತಿಸಿದರು. ಅಲ್ಲಿಯ ಬರಹದ ಶೈಲಿಯ ಬಗ್ಗೆ ಉಪಾಧ್ಯೆ ಅಡಕವಾಗಿ ಹೀಗೆ ಹೇಳುತ್ತಾರೆ : "The style is less Sanskrit ridden than that of *Chamundaraya- Purana,* but more diginified than that of later *Nompi Kathas*, plenty of which are available in old manuscripts"- ಅಷ್ಟೇ ಅಲ್ಲದೆ "Some struggle for clean expression of ideas is seen here & there" ಎಂದಿದ್ದಾರೆ. ಮಿತವ್ಯಯದ ನಿರ್ಬಂಧಕ್ಕೊಳಗಾಗದೆ ಕೃತಿಕಾರ ಅರ್ಧಮಾಗಧಿ ಪಠ್ಯಗಳಂತೆ ಪುನರಾವರ್ತನೆ, ವರ್ಣನೆ, ವಿವರಗಳನ್ನು ಕೃತಿಯಲ್ಲಿ ಒಳಗೊಂಡಿದ್ದಾನೆ. ಹಾಗಾಗಿ ಕೃತಿಯ ಶೈಲಿಯ ವಿವಿಧ ಅಂಶಗಳನ್ನು ಹೆಚ್ಚು

ವಿವರವಾಗಿ ಅಧ್ಯಯನ ಮಾಡಬೇಕಾದ ಅವಶ್ಯಕತೆಯನ್ನು ಉಪಾಧ್ಯೆ ಅವರು ಎತ್ತಿ ಹಿಡಿಯುತ್ತಾರೆ.

ಈ *ವಡ್ಡಾರಾಧನೆಯ* ಹತ್ತೊಂಬತ್ತು ಕತೆಗಳು ಹರಿಷೇಣನ *ಬೃಹತ್ಕಥಾಕೋಶದ* ೧೨೬ ರಿಂದ ೧೪೪ ರ ವರೆಗಿನ ಸಂಖ್ಯೆಯ ಕತೆಗಳೊಂದಿಗೆ ನಿಕಟ ಹೋಲಿಕೆ ಇರುವುದಾಗಿ ಉಪಾಧ್ಯೆ ಗುರುತಿಸುತ್ತಾರೆ. ಹರಿಷೇಣನ *ಬೃಹತ್ಕಥಾಕೋಶದಲ್ಲಿನ* ಪದ್ಯಗಳು *ವಡ್ಡಾರಾಧನೆಯಲ್ಲಿಯೂ* ಸಮಾನ ಸಂದರ್ಭದೊಂದಿಗೆ ಕಂಡು ಬರುತ್ತವೆ. ಕಥಾ ವಿವರಗಳ ಕ್ರಮದಲ್ಲಿ ಎರಡಕ್ಕೂ ಪೂರ್ಣ ರೂಪದ ಸಮಾನತೆ ಇಲ್ಲ. *ಬೃಹತ್ಕಥಾಕೋಶದ* ಕತೆಗಳಿಗಿಂತ *ವಡ್ಡಾರಾಧನೆಯ* ಕತೆಗಳು ದೀರ್ಘ. ಉಪಕತೆ, ಭವಗಳ ಬಗ್ಗೆ ಹೆಚ್ಚಿನ ಮಾಹಿತಿ, ಶೈಲೀಕೃತ ನಿರೂಪಣೆ *ವಡ್ಡಾರಾಧನೆಯಲ್ಲಿದೆ*. ವಡ್ಡಾರಾಧನಕಾರ ಈ ವಿವರಗಳಿಗೆ ಬೇರೆ ಕೃತಿಗಳನ್ನಾಧರಿಸಿರಬಹು ದೆನ್ನುತ್ತಾರೆ, ಉಪಾಧ್ಯೆ. ಉದಾ : ದೇವೇಂದ್ರನ *ಉತ್ತರಾಧ್ಯಯನದ ವ್ಯಾಖ್ಯಾನ*, ಪ್ರಭಾಚಂದ್ರನ *ಕಥಾಕೋಶ*, ವ್ಯಕ್ತಿ ನಾಮಗಳಲ್ಲಿ ಎರಡಕ್ಕೂ ಸಾಮ್ಯವಿದೆ. ಕಥೆಗಳಲ್ಲಿ ಅಲ್ಲಲ್ಲಿ ಕೊಂಚ ವ್ಯತ್ಯಾಸವಿದೆ. ಹರಿಷೇಣನಿಂದ ಸೂಚಿತವಾದ ಸಂದರ್ಭವನ್ನಿಟ್ಟುಕೊಂಡು ವಡ್ಡಾರಾಧನಕಾರ ಕನ್ನಡದ ಕತೆಗಳನ್ನು ತೀವ್ರತೆಯಿಂದ ಆಕಾರಗೊಳಿಸುತ್ತಾನೆ. *ಭಗವತೀ ಆರಾಧನೆಯ* ಪ್ರಾಕೃತ ವ್ಯಾಖ್ಯಾನ ವೊಂದಿದ್ದು, ಅದನ್ನು ಬೃಹತ್ಕಥಾಕೋಶಕಾರ ಹಾಗೂ ವಡ್ಡಾರಾಧನಕಾರ ಅನುಸರಿಸಿರಬೇಕೆಂಬ ತೀರ್ಮಾನಕ್ಕೆ ಉಪಾಧ್ಯೆ ಬರುತ್ತಾರೆ.

*ವಡ್ಡಾರಾಧನೆಯಲ್ಲಿ* ಬಳಕೆಯಾದ 'ಕವ"ತ' ಎಂಬ ಪ್ರಯೋಗ ಬೇರೆ ಕಡೆ ಹೇಗೆ ಬಳಕೆಗೊಂಡಿದೆ ಎಂಬ ವಿವರಣೆಯನ್ನು ಉಪಾಧ್ಯೆ ನೀಡುತ್ತಾರೆ. ಮಂತ್ರ, ತಂತ್ರವಿಧಾನದ ಜನಪ್ರಿಯ ದೈ...

ಆರಾಧನೆಯಲ್ಲಿನ ಕವಚಕ್ಕಿಂತ ಭಿನ್ನ ಪರಿಕಲ್ಪನೆ, ವಡ್ಡಾರಾಧನೆಯಲ್ಲಿದೆ. ಪರೀಷಹಗಳಿಂದ ಆಧ್ಯಾತ್ಮಿಕ ರಕ್ಷಣೆ ಪಡೆದ ಸೂಚಕವಾಗಿ 'ಕವಚ' ಎಂದಿದ್ದು, ಈ ಪದ *ಭಗವತೀ ಆರಾಧನೆಯ* ಭಾಗಕ್ಕೆ ಕೊಟ್ಟು ಹೆಸರಾಗಿದೆ ಎನ್ನುತ್ತಾರೆ ಉಪಾಧ್ಯೆ.

ವಡ್ಡಾರಾಧನೆ ಎನ್ನುವ ಹೆಸರು ಕನ್ನಡ ಕೃತಿಯ ಪ್ರತ್ಯೇಕ ಹೆಸರಾಗಿರದೆ, ಉಳಿದ ಆರಾಧನಾ ಕೃತಿಗಳಿಗಿಂತ ದೊಡ್ಡದು ಎಂಬರ್ಥದಲ್ಲಿ *ಭಗವತೀ ಆರಾಧನೆಗೆ* ಸಂದ ಹೆಸರು ಎಂದು ಉಪಾಧ್ಯೆ ನಿರ್ಣಯಿಸುತ್ತಾರೆ. ಕೃತಿಯ ಕಾಲವನ್ನು ಕ್ರಿ.ಶ. ೯೮ಕ್ಕಿಂತ ಹಿಂದೆ ಇದ್ದಿರಲಾರದೆಂದೂ ೧೪೦೩ ಕ್ಕಿಂತ ಈಚೆಗೆ ಇದ್ದಿರಲಾರದೆಂದೂ ಅವರು ಸಾಧಾರವಾಗಿ ನಿರ್ಧರಿಸುತ್ತಾರೆ.

* * * * *

ಪ್ರೊ. ಚಕ್ರವರ್ತಿಯವರಿಂದ ಸಂಪಾದಿತವಾಗಿದ್ದ ಕುಂದಕುಂದರ *ಪಂಚಾಸ್ತಿಕಾಯಸಾರ* ಕೃತಿಯನ್ನು ಪರಿಷ್ಕರಿಸಿ ಹೊಸ ಆವೃತ್ತಿಯನ್ನು ಉಪಾಧ್ಯೆ ೧೯೭೫ರಲ್ಲಿ ಸಿದ್ಧಪಡಿಸಿದರು. ೧೯೦೧ರಲ್ಲಿ ಇಟಲಿಯ ಪಿ.ಇ. ಪಾವೊಲಿನಿಯವರು ರೋಮನ್ ಲಿಪಿಯಲ್ಲಿ ಅಪೂರ್ಣವಾಗಿ ಇದೇ ಕೃತಿಯನ್ನು ಸಂಪಾದಿಸಿದ್ದರು. ಈ ಕೃತಿಯ ಪಾಠಗಳನ್ನು ಉಪಾಧ್ಯೆಯವರು ಪರಿಷ್ಕರಣಕ್ಕೆ ಬಳಸಿಕೊಂಡರು. ಪರಿಷ್ಕರಣದ ಸಂದರ್ಭದಲ್ಲಿ ಉಪಾಧ್ಯೆ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾರೆ. ಅಡಿ ಟಿಪ್ಪಣಿಯಾಗಿ ದಾಖಲಾದ *ಪಂಚಾಸ್ತಿಕಾಯಸಾರದ* ಅಮೃತಚಂದ್ರನ ಸಂಸ್ಕೃತ ಛಾಯೆಯನ್ನು ಪ್ರಾಕೃತ ಗಾಹೆಗಳ ಕೆಳಕ್ಕೆ ಸ್ಥಳಾಂತರಿಸಿದ್ದಾರೆ. ಈ ಕೃತಿಯ ವಿದ್ವತ್‌ಪೂರ್ಣ ಓದಿಗೆ ಈ ಮಾರ್ಪಾಟು ಅವಶ್ಯವಾಗಿದ್ದು, ಕೃತಿಯ ಉಪಯುಕ್ತತೆ ಹೆಚ್ಚಿಸುವಲ್ಲಿ

ಸಹಕಾರಿಯಾದುದಾಗಿ ಅವರಿಗೆ ಕಂಡಿದೆ. ಇಷ್ಟಾಗಿ, ಪ್ರಾಕೃತ ಗಾಹೆ ಹಾಗೂ ವ್ಯಾಖ್ಯಾನದ ಸಂಪಾದಿತ ಪಠ್ಯವನ್ನು ಸಿದ್ಧಪಡಿಸಲು ಶುದ್ಧ ಹಸ್ತಪ್ರತಿಗಳ ಅವಶ್ಯಕತೆಯನ್ನು ಅವರು ಮನಗಾಣುತ್ತಾರೆ. ಮೈಸೂರಿನ ಮಾನಸಗಂಗೋತ್ರಿಯ ಶಾಂತ ಹಾಗೂ ಹಿತಕರ ವಾತಾವರಣವು ಯೋಜಿತ ಕಾಲಾವಧಿಗಿಂತ ಮೊದಲೇ ಈ ಸಂಪಾದನಾಕಾರ್ಯ ಪೂರ್ಣಗೊಳ್ಳಲು ಸಹಕಾರಿಯಾಯಿತೆಂದು ಕೃತಜ್ಞತೆ ಸಲ್ಲಿಸಿದ್ದಾರೆ.

ಪ್ರಾಕೃತ ಕೃತಿ ಸ್ವಾಮಿಕುಮಾರನ '*ಕಾರ್ತಿಕೇಯಾನುಪ್ರೇಕ್ಷಾ*'ವನ್ನು ಶುಭಚಂದ್ರನ ಸಂಸ್ಕೃತ ವ್ಯಾಖ್ಯಾನದೊಂದಿಗೆ ಉಪಾಧ್ಯೆಯವರು ವಿದ್ವತ್‌ಪೂರ್ಣವಾಗಿ ೧೯೬೦ರಲ್ಲಿ ಸಂಪಾದಿಸಿ ಹೊರ ತಂದಿದ್ದಾರೆ. ಧಾರ್ಮಿಕ ಮಹತ್ವವುಳ್ಳ ಅನುಪ್ರೇಕ್ಷಾ ಸಾಹಿತ್ಯದ ವ್ಯಾಪ್ತಿ, ಉದ್ದೇಶ, ವಿಕಾಸಗಳನ್ನು ಉಪಾಧ್ಯೆ ಮುನ್ನುಡಿಯಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾರೆ. ಶುಭಚಂದ್ರನ ವ್ಯಾಖ್ಯಾನವನ್ನು ಲಬ್ಧ ಹಸ್ತಪ್ರತಿಗಳ ಮೂಲಕ ಆದಷ್ಟೂ ತೃಪ್ತಿಕರವೆನ್ನುವಂತೆ ಸಂಪಾದಿಸಲಾಗಿದೆ. ಕೃತಿಕಾರನ ಕಾಲ, ವ್ಯಕ್ತಿತ್ವದ ಬಗ್ಗೆ ಹೊಸ ಬೆಳಕು ಚೆಲ್ಲಲಾಗಿದೆ. ಪಠ್ಯದ ವಿವಿಧ ಆಯಾಮಗಳನ್ನು ವಿಮರ್ಶಾತ್ಮಕವಾಗಿ ಇಲ್ಲಿ ಅಭ್ಯಸಿಸಲಾಗಿದೆ. ಶ್ರಾವಕ ಹಾಗೂ ಮುನಿಜನಕ್ಕೆ ನಿರಂತರವಾಗಿ ಧಾರ್ಮಿಕ ಪ್ರೇರಣೆಯನ್ನು ನೀಡುತ್ತ ಬಂದ ಈ ಕೃತಿಯ ಹಸ್ತಪ್ರತಿಗಳು ಅಧಿಕ ಸಂಖ್ಯೆಯಲ್ಲಿ ದೊರೆತಿರುವುದೇ ಕೃತಿಯ ಜನಪ್ರಿಯತೆಗೆ ಸಾಕ್ಷಿ. ತಾವು ಬಳಸಿಕೊಂಡ ಹಸ್ತಪ್ರತಿಗಳ ಸ್ವರೂಪವನ್ನು ವಿವರವಾಗಿ ಡಾ. ಉಪಾಧ್ಯೆ ಪರಿಚಯಿಸುತ್ತಾರೆ. 'ಬ' ಕಾಗದದ ಹಸ್ತಪ್ರತಿಯಲ್ಲಿನ ತಿದ್ದುಪಾಡುಗಳು ಮೂಲ ಹಸ್ತಪ್ರತಿ ಸಿದ್ಧಗೊಂಡ ದೀರ್ಘಕಾಲದ ನಂತರ ಆಗಿರಬಹುದೆಂದು ಅವರು ನಿರ್ಧರಿಸುತ್ತಾರೆ. ಈ ತಿದ್ದುಪಾಡುಗಳು ಶುಭಚಂದ್ರನ ವ್ಯಾಖ್ಯಾನದ ಪಾಠವನ್ನನುಸರಿಸಿದ್ದೆಂಬ ತೀರ್ಮಾನ ಅವರದು. ಹೀಗೆ ಮಾಡುವಾಗ

ಸರಿಯಾದ ಹಾಗೂ ಸರಿ ಎನಿಸಬಹುದಾದ ಪಾಠವನ್ನೂ ತಿದ್ದಿರುವುದು ಅವರ ಗಮನಕ್ಕೆ ಬಂದಿರುತ್ತದೆ. ಲಿಪಿದೋಷಗಳನ್ನು ತಿದ್ದಿ ಲುಪ್ತ ಪದ್ಯಗಳನ್ನು ಸೇರಿಸಿರುವ ಯತ್ನವನ್ನು ಉಪಾಧ್ಯೆ ಗುರುತಿಸುತ್ತಾರೆ. 'ಬ' ಕಾರದ ಬದಲು 'ವ' ಕಾರ ಬಳಕೆಯತ್ತ ಪ್ರತಿಕಾರ ಒಲವುಳ್ಳವನಾಗಿದ್ದು, ವ್ಯಾಖ್ಯಾನದ ಪ್ರಭಾವವುಳ್ಳ ಈ ಪ್ರತಿಯೇ ಕಾಲದ ದೃಷ್ಟಿಯಿಂದ ಶುದ್ಧ ರೂಪವುಳ್ಳದ್ದೆಂದು ಅವರು ನಿರ್ಧರಿಸುತ್ತಾರೆ. 'ಲ' ಹಸ್ತಪ್ರತಿಕಾರ ಸಾದೃಶ್ಯರೂಪವುಳ್ಳ ಅಕ್ಷರಗಳ ನಡುವಿನ ಭೇದವನ್ನು ಗುರುತಿಸಲು ಅಸಮರ್ಥನಾದ ಕಾರಣ ಆತನ ಓದು ದೋಷಪೂರ್ಣವಾದ್ದೆಂದು ಉಪಾಧ್ಯೆ ನಿರ್ಧರಿಸುತ್ತಾರೆ. ಪಾಠ ನಿರ್ಣಯದ ಸಂದರ್ಭದಲ್ಲಿ ಉಪಾಧ್ಯೆಯವರು, ಪ್ರತಿಷ್ಠಿತ ಕೇಂದ್ರದಿಂದ ಅತ್ಯಂತ ದೂರದಲ್ಲಿ ಬಳಕೆಯಲ್ಲಿರುವ ಉಪಭಾಷಿಕ ರೂಪವನ್ನು ಹೊಂದಿದ ಪಾಠವನ್ನು ಅಲಕ್ಷಿಸಿಲ್ಲ. ಛಂದೋನಿಯಮಾನುಸರಣೆಗಾಗಿ ಬಳಕೆಯಾದ ವ್ಯಾಕರಣದೂರ ಪ್ರಯೋಗಗಳನ್ನು ತಿದ್ದಿಲ್ಲ. ಸಂಸ್ಕೃತ ವ್ಯಾಖ್ಯಾನದ ಪಾಠ ನಿರ್ಣಯದ ಸಂದರ್ಭದಲ್ಲಿಯೂ ಪ್ರಮಾಣಬದ್ಧ ವ್ಯಾಕರಣ ರೂಪದ ಉಲ್ಲಂಘನೆಯಾಗಿದ್ದರೂ ತಿದ್ದಿಲ್ಲ. ಅಲ್ಲಲ್ಲಿ ಕಂಡು ಬರುವ ಇಂಥ ವಿಚಿತ್ರ ರೂಪಗಳು ಸಾಮಾನ್ಯ ಸಂಗತಿ ಎನ್ನುತ್ತಾರೆ.

ಮುನ್ನುಡಿಯ ಎರಡನೇ ಭಾಗವು 'ಅನುಪ್ರೇಕ್ಷಾ' ಪರಿಕಲ್ಪನೆಯನ್ನು ವಿವರಿಸುತ್ತಾ ಭಾರತೀಯ ಧಾರ್ಮಿಕ ಸಾಹಿತ್ಯದಲ್ಲಿನ ಅನುಪ್ರೇಕ್ಷಾ ಸಾಹಿತ್ಯದ ಕಾಣಿಕೆಯ ಸ್ವರೂಪವನ್ನು ವಿಶದಪಡಿಸುತ್ತದೆ. ಜೈನ ತಾತ್ವಿಕ ಚಿಂತನೆಯಲ್ಲಿ ಅನುಪ್ರೇಕ್ಷಾ ಧ್ಯಾನದ ಉದ್ದೇಶ, ವ್ಯಾಪ್ತಿ, ವಿಷಯಗಳ ಕೂಲಂಕಷ ವಿವೇಚನೆಯಿದೆ. 'ಅನುಪ್ರೇಕ್ಷೆ' ಕುರಿತಂತೆ ವಿವಿಧ ಜೈನ ಧಾರ್ಮಿಕ ಕೃತಿಗಳಲ್ಲಿನ ಗ್ರಹಿಕೆಗಳನ್ನು ತೌಲನಿಕವಾಗಿ ಉಪಾಧ್ಯೆ ವಿವೇಚಿಸುತ್ತಾರೆ.

ಶಾಸನ, ಶಾಸ್ತ್ರ, ಸಾಹಿತ್ಯ, ಐತಿಹ್ಯಗಳ ಆಧಾರಗಳನ್ನು ವಿಮರ್ಶಾತ್ಮಕವಾಗಿ, ತೌಲನಿಕವಾಗಿ ಬಳಸಿಕೊಂಡು ಕೃತಿಕಾರನ ಕಾಲವನ್ನು ಉಪಾಧ್ಯೆ ನಿರ್ಣಯಿಸುತ್ತಾರೆ. ಕುಂದಕುಂದ, ವಟ್ಟಕೇರ, ಶಿವಾರ್ಯ, ಉಮಾಸ್ವಾತಿ, ಪೂಜ್ಯಪಾದ, ಯೋಗೀಂದು, ನೇಮಿಚಂದ್ರರಿಗಿಂತ ಸ್ವಾಮಿಕುಮಾರ ಇತ್ತೀಚಿನವನೆಂದೂ ಹದಿಮೂರನೇ ಶತಮಾನದ ಬ್ರಹ್ಮದೇವನಿಗಿಂತ ಮೊದಲಿನವನೆಂದೂ ಉಪಾಧ್ಯೆ ನಿರ್ಧರಿಸುತ್ತಾರೆ.

ತಾವು ಸಂಪಾದಿಸಿದ ಕೃತಿಯ ಭಾಷಿಕ ಸ್ಥಿತಿಯನ್ನು ಉಪಾಧ್ಯೆಯವರು ತಪ್ಪದೆ ವಿವೇಚಿಸುತ್ತಾರೆ. '*ಕಾರ್ತಿಕೇಯಾನುಪ್ರೇಕ್ಷಾ*' ಕೃತಿಯ ಜೈನ ಶೌರಸೇನಿ ಪ್ರಾಕೃತ ಉಪಭಾಷಿಕ ರೂಪವನ್ನು ಹೊಂದಿದೆ ಎಂದು ಅಧ್ಯಯನದ ಅನುಕೂಲಕ್ಕೆ ನಿರ್ಧರಿಸಬಹುದೆಂದೂ ಆದರೆ ಅದೇ ಖಚಿತವಲ್ಲವೆಂದು ಆರ್. ಪಿಶಲ್ ನೀಡುವ ಎಚ್ಚರಿಕೆಯನ್ನು ಗಮನಿಸಬೇಕೆಂಬ ನಿಲುವು ಅವರದು. ಈ ಉಪಭಾಷೆಯ ಲಕ್ಷಣಗಳನ್ನು ಉಪಾಧ್ಯೆ ಗುರುತಿಸಲೆತ್ನಿಸುತ್ತಾರೆ. ಕರ್ತೃವಿನ ಕಾಲಾವಧಿಯಿಂದ ದೂರವಿರುವ ಹಸ್ತಪ್ರತಿಗಳಲ್ಲೆಲ್ಲ ಶುಭಚಂದ್ರನ ಪಠ್ಯದಿಂದ ಮುಕ್ತವಾದ 'ಬ' ಹಸ್ತಪ್ರತಿಯು ಉಪಭಾಷಿಕತೆಯ ದೃಷ್ಟಿಯಿಂದ ಉಪಾಧ್ಯೆಯವರಿಗೆ ಮುಖ್ಯವೆನಿಸುತ್ತದೆ. ಈ ಪ್ರಾಕೃತ ಉಪಭಾಷೆಯಾದ ಜೈನ ಶೌರಸೇನಿಯ ಲಕ್ಷಣವಾಗಿ 'ಳ' ಧ್ವನಿಯ ಬಳಕೆ ಇದೆ. ಕನ್ನಡ, ತೆಲುಗು, ಮಲೆಯಾಳಂ ಹಸ್ತಪ್ರತಿಗಳಲ್ಲಿನ 'ಳ'ದ ಬಳಕೆಯು ಪ್ರಾಚೀನ ಶೌರಸೇನಿ ಉಪಭಾಷೆಯ ಲಕ್ಷಣವೇ ಆಗಿದೆ ಎಂಬ ಅಭಿಪ್ರಾಯ ಅವರದು.

ಆ. ನೇ. ಉಪಾಧ್ಯೆಯವರಿಗೆ ಡಿ. ಲಿಟ್. ಪದವಿ ದೊರಕಿಸಿಕೊಟ್ಟ ಸಂಪಾದಿತ ಕೃತಿ '*ಪ್ರವಚನಸಾರ*'ದ ಸುದೀರ್ಘ ಮುನ್ನುಡಿಯಲ್ಲಿ ಜೈನ

ಧರ್ಮದ ಇತಿಹಾಸವೇ ನಿರೂಪಿತವಾಗಿದೆ. ೧೯೩೫ರಲ್ಲಿ ಮುಂಬಯಿಯ ರಾಯಚಂದ ಜೈನಶಾಸ್ತ್ರ ಮಾಲೆಯ ವತಿಯಿಂದ ಈ ಗ್ರಂಥ ಪ್ರಕಾಶಿತವಾಯಿತು. ೧೨೫ ಪುಟಗಳ ಸುದೀರ್ಘ ಪ್ರಸ್ತಾವನೆಯನ್ನು ಈ ಕೃತಿ ಹೊಂದಿದೆ. ಜೈನ ಸಾಹಿತ್ಯದ ಸಮಗ್ರ ಇತಿಹಾಸ ರಚನೆ ವಿದ್ವತ್ ಲೋಕದ ತುರ್ತು ಅಗತ್ಯವಾಗಿದ್ದ, ಈ ಉದ್ದೇಶ ಹೊತ್ತುಕುಂದಕುಂದರ ಬದುಕು-ಬರಹವನ್ನು ಒಳಗೊಂಡ ಪ್ರಸ್ತಾವನಾ ಪ್ರಬಂಧವುಳ್ಳ ಸಂಪಾದಿತ ಕೃತಿ ಹೊರಬಂದಿದೆ ಎನ್ನುತ್ತಾರೆ-ಉಪಾಧ್ಯೆ.

ಈ ಕೃತಿಯ ಪ್ರಸ್ತಾವನೆಯು ಆರು ವಿಭಾಗಗಳಲ್ಲಿದೆ. ಮೊದಲನೇ ವಿಭಾಗದಲ್ಲಿ ಕುಂದಕುಂದರ ಬಗೆಗೆ ಸಾಹಿತ್ಯ ಹಾಗೂ ಶಾಸನಗಳಲ್ಲಿ ದೊರೆಯುವ ಪರಂಪರಾನುಗತ ಮಾಹಿತಿಗಳನ್ನು ಸಂಯೋಜಿಸಿ ವಿಮರ್ಶಾತ್ಮಕವಾಗಿ ಮೌಲ್ಯಮಾಪನ ಮಾಡಿದ್ದಾರೆ. ದಕ್ಷಿಣದಲ್ಲಿ ದಿಗಂಬರ ಜೈನ ಪರಂಪರೆಯ ನಾಲ್ಕು ಮುನಿ ಸಂಘಗಳಲ್ಲಿ ಮೂರು ಸಂಘಗಳು ತಮ್ಮನ್ನು ಕುಂದಕುಂದಾನ್ವಯಕ್ಕೆ ಸೇರಿದವರೆಂದು ಹೇಳಿಕೊಳ್ಳುವುದನ್ನೂ, ಮಂಗಲಶ್ಲೋಕದಲ್ಲಿ ತೀರ್ಥಂಕರ ಮಹಾವೀರ ಮತ್ತು ಗೌತಮ ಗಣಧರರ ನಂತರದ ಸ್ಥಾನದಲ್ಲಿ ಕುಂದಕುಂದರನ್ನು ಗೌರವಿಸಿರುವುದನ್ನೂ ವಿವರಿಸಿದ್ದಾರೆ. ಕುಂದಕುಂದರ ಕೃತಿಗಳು ಉತ್ತರಕಾಲೀನ ಕರ್ತೃಗಳಿಗೆ, ಸಂದರ್ಭಾನುಸಾರ ಉಲ್ಲೇಖಿಸಲು, ಆಕರ ಗಳಾಗಿರುವುದು ಆ ಗ್ರಂಥಗಳ ಪ್ರಾಮಾಣ್ಯಕ್ಕೆ ಸಾಕ್ಷಿಯಾಗಿರುವುದನ್ನು ದಾಖಲಿಸಿದ್ದಾರೆ. ಕುಂದಕುಂದರ *ಪಂಚಾಸ್ತಿಕಾಯ*, *ಪ್ರವಚನಸಾರ* ಮತ್ತು *ಸಮಯಸಾರ*ಗಳು ನಾಟಕ ತ್ರಯ ಅಥವಾ ಪ್ರಾಭೃತ ತ್ರಯಗಳೆಂದು ಪಾರಿಭಾಷಿಕವಾಗಿ ಪ್ರಖ್ಯಾತವಾಗಿರುವುದಕ್ಕೆ ವೇದಾಂತಿಗಳಲ್ಲಿ

ಪ್ರಸ್ಥಾನ ತ್ರಯಗಳಿಗೆ ಇರುವ ಸ್ಥಾನವೇ ಇವುಗಳಿಗೆ ಇದೆ ಎಂದು ತಿಳಿಸುವುದೇ ಆಗಿದೆ ಎಂದಿದ್ದಾರೆ.

ಕುಂದಕುಂದರಿಗೆ ಪರಂಪರೆಯಲ್ಲಿ ಇರುವ ಪದ್ಮನಂದಿ, ಕುಂದಕುಂದ, ವಕ್ರಗ್ರೀವ, ಏಲಾಚಾರ್ಯ ಮತ್ತು ಗೃದ್ಧಪಿಚ್ಛ ಎಂಬ ಐದು ಹೆಸರುಗಳನ್ನು ವಿವರವಾಗಿ ಚರ್ಚಿಸಿ, ಪದ್ಮನಂದಿ ಎಂಬುದು ಅವರ ಹೆಸರು ಹಾಗೂ ಅವರು ಕೊಂಡಕುಂದ ಪುರದವರಾದುದರಿಂದ ಕೊಂಡಕುಂದಾಚಾರ್ಯ-ಕುಂದಕುಂದಾಚಾರ್ಯರೆಂದು ಪ್ರಸಿದ್ಧರಾಗಿದ್ದರು ಎಂಬ ಮಹತ್ವದ ನಿರ್ಣಯಕ್ಕೆ ಬಂದಿದ್ದಾರೆ. ಉಪಲಬ್ಧ ಆಧಾರಗಳಿಂದ ಏಲಾಚಾರ್ಯ ಎಂಬ ಹೆಸರಿನ ಬಗ್ಗೆ ನಿರ್ಣಯಕ್ಕೆ ಬರಲಾಗುವುದಿಲ್ಲ ಎಂದು ತಿಳಿಸಿದ್ದಾರೆ. ಕುಂದಕುಂದರ ಜೀವನ ವಿವರಗಳನ್ನು ತಿಳಿಸುವ ಕಥೆಗಳನ್ನೂ ವಿಮರ್ಶಿಸಿದ್ದಾರೆ. ಕುಂದಕುಂದರ ಆಧ್ಯಾತ್ಮಿಕ ಗುರುಪರಂಪರೆಯನ್ನು ಗುರುತಿಸುತ್ತ ಜೈನಸಂಘ ದಿಗಂಬರ ಮತ್ತು ಶ್ವೇತಾಂಬರವೆಂದು ವಿಭಜನೆಗೊಂಡ ಮೇಲೆ ದಿಗಂಬರ ದಾರ್ಶನಿಕರು ತಮ್ಮನ್ನು ಮೂಲ ಸಂಘದವರೆಂದು ಗುರುತಿಸಿಕೊಳ್ಳುವುದನ್ನೂ ಆ ಸಂಘದಲ್ಲಿ ಮುನ್ನಿನವರನ್ನೆಲ್ಲ ಮೀರಿದ ಗೌರವಕ್ಕೆ ಕುಂದಕುಂದರು ಪಾತ್ರರಾಗಿರುವುದನ್ನೂ ವಿವರಿಸಿ ಕುಂದಕುಂದರ ನಂತರದ ಸ್ವಲ್ಪಕಾಲದಲ್ಲೇ ಕುಂದಕುಂದಾನ್ವಯವೆಂಬ ಗುರ್ವಾವಲಿ ಪ್ರಾರಂಭವಾಯಿತೆಂಬ ಡಾ. ಉಪಾಧ್ಯೆಯವರ ಸಂಶೋಧನೆ ಮೌಲಿಕವಾದುದಾಗಿದೆ.

ಪ್ರಸ್ತಾವನೆಯ ಎರಡನೆಯ ಭಾಗದಲ್ಲಿ ಡಾ. ಉಪಾಧ್ಯೆ ಅವರು ಕುಂದಕುಂದರ ಕಾಲವನ್ನು ಕುರಿತು ಚರ್ಚಿಸಿದ್ದಾರೆ. ಇಲ್ಲಿ ಕುಂದಕುಂದರ ಕಾಲವನ್ನು ಕುರಿತು ಚರ್ಚಿಸಿರುವ ಜರ್ಮನ್ ವಿದ್ವಾಂಸ ಹೋಯೆರ್ನ್ಲೆ

ಅವರನ್ನೊಳಗೊಂಡಂತೆ ಪಂಡಿತ್ ನಾಥೂರಾಮ್ ಪ್ರೇಮಿ, ಡಾ. ಕೆ. ಬಿ. ಪಾಠಕ್, ಪ್ರೊ. ಎ. ಚಕ್ರವರ್ತಿ, ಪಂಡಿತ್ ಜುಗಲ್ ಕಿಶೋರ್ ಅವರುಗಳ ಅಭಿಪ್ರಾಯಗಳನ್ನೆಲ್ಲ ನಿರೂಪಿಸಿದ್ದಾರೆ. *ಷಟ್ಖಂಡಾಗಮದ* ಟೀಕಾಕಾರರಾಗಿ ಹಾಗೂ ಕುರುಳ್‌ನ ಗ್ರಂಥಕಾರರಾಗಿ ಕುಂದಕುಂದರ ಸಮಯವನ್ನು ಕ್ರಿಸ್ತಶಕದ ಆರಂಭಕಾಲವೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯಕ್ಕೆ ಕುಂದಕುಂದರ ಪ್ರಾಕೃತ ಭಾಷೆಯನ್ನೂ ಆಧಾರವಾಗಿ ತೆಗೆದುಕೊಂಡಿದ್ದಾರೆ. ದಿಗಂಬರ ಪರಂಪರೆಯಲ್ಲಿ ಆಗಮಗ್ರಂಥಗಳ ಪತ್ಯ ವಿಸ್ಮೃತಿಗೊಳಗಾಗಿತ್ತು. ಜೈನಸಂಘಕ್ಕೆ ಧಾರ್ಮಿಕ ಜ್ಞಾನದ ಅವಶ್ಯಕತೆಯನ್ನು ಪೂರೈಸುವ ಉತ್ತರದಾಯತ್ವ ಕುಂದಕುಂದರ ಮೇಲಿತ್ತು. ಅದಕ್ಕಾಗಿ ಅವರು ಯಾವ ಆಗಮಗಳ ಜ್ಞಾನ ತಮಗೆ ಗುರುಪರಂಪರೆಯಿಂದ ದೊರಕಿತ್ತೋ ಅದನ್ನಾಧರಿಸಿ ಪ್ರಾಕೃತದಲ್ಲಿ ಕಿರುಗ್ರಂಥಗಳನ್ನು ರಚಿಸಿದರು. ಮೌಖಿಕ ಪರಂಪರೆಯಲ್ಲಿ ಚದುರಿ ಹೋಗಬಹುದಾಗಿದ್ದ ಆಗಮಗಳಲ್ಲಿದ್ದ ಜ್ಞಾನವನ್ನು ತಮ್ಮ ಕೃತಿಗಳ ಮೂಲಕ ಒಂದು ಕಡೆಗೆ ತಂದ ಕೇಂದ್ರವಾದರು ಕುಂದಕುಂದರು. ಹಾಗೆಯೇ ಅವರ ಕೃತಿಗಳು ಅನೇಕ ವ್ಯಾಖ್ಯಾನಕಾರ ಹಾಗೂ ವ್ಯಾಖ್ಯಾನಗಳ ಮೂಲಕ ವಿಕೇಂದ್ರೀಕರಣಗೊಂಡು ವಿಕಾಸಹೊಂದಿ ಜೈನ ಸೈದ್ಧಾಂತಿಕ ಮೀಮಾಂಸೆಯ ಸಮೃದ್ಧ ಬೆಳವಣಿಗೆಗೆ ಕಾರಣವಾದವು.

*ಪ್ರವಚನಸಾರದ* ಪ್ರಸ್ತಾವನೆಯ ಮೂರನೆಯ ಭಾಗದಲ್ಲಿ ಕುಂದಕುಂದರ ಕೃತಿಗಳ ಬಗ್ಗೆ ಡಾ. ಉಪಾಧ್ಯೆ ಅವರು ಚರ್ಚಿಸಿದ್ದಾರೆ. ಕುಂದಕುಂದರು ಎಂಬತ್ನಾಲಕ್ಕೂ ಹೆಚ್ಚು ಪ್ರಾಭೃತ (ಗ್ರಂಥ) ಗಳನ್ನು ರಚಿಸಿದ್ದರೆಂದು ಪರಂಪರೆಯು ಹೇಳುತ್ತದೆ. ಪ್ರಾಭೃತವೆಂದರೆ ಗೌರವಪೂರ್ವಕ ಕೊಡುಗೆ ಎಂದು ಅರ್ಥ. ಒಂದು ವ್ಯಾಖ್ಯಾನದ

ಪ್ರಕಾರ ಆಧ್ಯಾತ್ಮಿಕ ಉದ್ದೇಶಕ್ಕಾಗಿ ರಚಿತವಾದ ಅಥವಾ ಸಂಪಾದಿತವಾದ ಈ ಕೃತಿಗಳು ಪರಮಾತ್ಮನಿಗೆ ಭಕ್ತಿಪೂರ್ವಕ ಕೊಡುಗೆಗಳು (ಯಥಾ ಕೋಽಪಿ ದೇವದತ್ತಃ ರಾಜದರ್ಶನಾರ್ಥಂ ಕಿಂಚಿತ್ ಸಾರಭೂತಂ ವಸ್ತು ರಾಜ್ಞೇ ದದಾತಿ ತತ್ ಪ್ರಾಭೃತಂ ಭಣ್ಯತೇ। ತಥಾ ಪರಮಾತ್ಮಾರಾಧಕ ಪುರುಷಸ್ಯ ನಿರ್ದೋಷಿ ಪರಮಾತ್ಮ ರಾಜದರ್ಶನಾರ್ಥಂ ಇದಮಪಿ ಶಾಸ್ತ್ರಂ ಪ್ರಾಭೃತಮ್) ಎಂಬ ಚಮತ್ಕಾರಿಕ ವ್ಯಾಖ್ಯಾನಗಳು ಕಂಡುಬರುತ್ತದೆ. ಆದರೆ ಪರಂಪರೆಯ ಪ್ರಕಾರ ಪಾಹುಡವೆಂದರೆ ಅಧಿಕಾರ (ಅಧ್ಯಾಯ) ಎಂದು ಅರ್ಥ (ಅಹಿಯಾರೋ ಪಾಹುಡಯಂ ಏಯತ್ಥೋ - ಗೊಮ್ಮಟಸಾರ - ಜೀವಕಾಂಡ, ಗಾಹೆ ೩೪೧).

'*ಷಟ್ಖಂಡಾಗಮಟೀಕಾ*' ಮತ್ತು '*ಮೂಲಾಚಾರ*' ಗ್ರಂಥಗಳು ಕುಂದಕುಂದರ ರಚನೆಗಳು ಹೌದೇ ಅಲ್ಲವೇ ಎಂಬ ಬಗ್ಗೆ ಡಾ. ಉಪಾಧ್ಯೆ ಅವರು ಹೇಳಿರುವ ಮಾತುಗಳು ಸಂಶೋಧಕನ ಸಂಯಮದ ದ್ಯೋತಕಗಳಾಗಿವೆ.

*ದಶಭಕ್ತಿ, ಅಷ್ಟಪಾಹುಡ, ರಯಣಸಾರ, ಬಾರಸ ಅಣುವೆಕ್ಖ, ನಿಯಮಸಾರ, ಪಂಚಾಸ್ತಿಕಾಯಸಾರ, ಸಮಯಸಾರ* ಗ್ರಂಥಗಳ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ.

ಪ್ರಸ್ತಾವನೆಯ ನಾಲ್ಕನೆಯ ಭಾಗದಲ್ಲಿ *ಪ್ರವಚನಸಾರದ* ಬಗ್ಗೆ ಅತ್ಯಂತ ವಿವರವಾದ ಚರ್ಚೆಯಿದೆ. ಐದನೆಯ ಭಾಗದಲ್ಲಿ *ಪ್ರವಚನಸಾರದ* ಮೇಲೆ ರಚಿತವಾದ ವ್ಯಾಖ್ಯಾನಗಳ ಬಗ್ಗೆ ದೀರ್ಘವಾದ ವಿವರಣೆಯಿದೆ. ಈ ಸಂದರ್ಭದಲ್ಲಿಯೇ ಆಧ್ಯಾತ್ಮಿ ಬಾಲಚಂದ್ರದೇವನ ರಚನೆಯಾದ *ಪ್ರವಚನಸಾರ ಕನ್ನಡ ತಾತ್ಪರ್ಯ*

ವೃತ್ತಿಯ ಬಗ್ಗೆ ಬಹಳ ವಿವರವಾಗಿ ತಿಳಿಸಿದ್ದಾರೆ. ಆರನೆಯ ಭಾಗದಲ್ಲಿ ಪ್ರವಚನಸಾರದ ಪ್ರಾಕೃತ ಭಾಷಾ ಸ್ವರೂಪವನ್ನು ಕುರಿತ ವಿವರಣೆಯಿದೆ. ಈ ಭಾಗ ಪ್ರಾಕೃತ ಭಾಷಾಶಾಸ್ತ್ರಕ್ಕೆ ಬಹಳ ದೊಡ್ಡ ಕೊಡುಗೆಯಾಗಿದ್ದು ಜೈನ ಶೌರಸೇನಿ ಭಾಷೆಯನ್ನು ಕುರಿತ ಮೌಲಿಕ ವಿಚಾರಗಳು ಇಲ್ಲಿವೆ.

ಡಾ. ಉಪಾಧ್ಯೆ ಅವರಿಂದ ಸಂಪಾದಿತವಾದ '*ಪ್ರವಚನಸಾರ*' ಅವರ ಮೇರುಕೃತಿಗಳಲ್ಲೊಂದು. ಇದಕ್ಕೆ ಮುಂಬೈ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿ ದೊರಕಿದೆ. ಈ ಕೃತಿಯನ್ನು ಕುರಿತಂತೆ ದೇಶ ವಿದೇಶಗಳ ಖ್ಯಾತ ವಿದ್ವಾಂಸರು ಹಾಗೂ ಜರ್ನಲ್‌ಗಳು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಹೀಗಿವೆ :

Dr. W. SCHUBRING, Hamburg University, Germany : "You are to be congratulated to have finished a great work..... I do not hesitate to say that thanks to your labour a remarkable advancement of science can be recorded."

Dr. M.WINTERNITZ, Prague University : "Excellent edition and translation of Kundakundacarya's Pravacanasara with the extremely valuable Introduction."

Dr. A.BERRIEDALE KEITH, Edinburgh University, "This is of course a most valuable edition and your discussion of the philosophy of

the text will be of permanent value to all students of Indian philosophical development".

Dr. S.K.CHATTERJI, Calcutta University : "Your Introduction is full and detailed, and I agree with what your say about the personality of the author as well as the nature of the Prakrit. This is a very painstaking and erudite piece of work done in a very fine style."

Prof. M.HRIYANNA, Mysore University : "Variorum edition of Pravacanasara. I am much impressed by its thoroughness. I have no doubt that the book will be of great use to all students of Indian thought."

Dr. B.L. ATREYA, Benares Hindu University : "It is indeed a masterly eassy on Sri Kundakundacarya and his work Pravcanasara, which no student of Jaina Literature and Philosophy can afford to neglect. I am very much impressed by your vast information and deep insight."

Prof. HIRALAL JAIN, King Edward College, Amraoti : "Your Introduction is a splendid piece

of scholarship. One can now say that Kundakunda has been studied critically, and a definite lead has been given as to the way the Prakrit Jaina works ought to be studied".

Dr. R.SHAMASHASTRY, Mysore : 'It is a learned contribution on the language and philosophy of the text."

Maha-Mahopadhyaya .R. NARASIMHA-CHARYA, Bangalore : "Almost every page bears abundant testimony to your vast erudition and deep research..... exhibit a rare scholarship and a thorough grasp of the subject."

*Journal of the Royal Asiatic Society* (July 1936) : Professor Upadhye gives us not merely a very careful account of Kundakunda and his works in general and the Pravacanasara in particular but also a most valuable summary of certain of the Jain metaphysical doctrines (pp. lxii-xcv). His most interesting contribution is perhaps his conclusion that the similarities of Jainism, Buddhism, and the Samkhya philosophy point to the existence of a great Magadhan indigenous religion which flourished before the advent of the

Aryans; to the commingling of the streams of Aryan and indigenous religion at the close of the Brahmana period we owe, on the one hand, the Atmavidya of the Upanisads, and the tenets of Jainism and Buddhism on the other."

*Journal of the University of Bombay* (IV, iii, p. 126) : "..... the edition is an excellent one and is bound to be extremely helpful in the study of Sri Kundakunda and his Pravacanasara on account of the wealth of information which it contains and the thought-provoking observations of the editor, which show his deep study and patient research."

*Journal of the American O. Society* (December 1936) : "The introductiory essay is very elaborate and deals with all aspects of Kundakunda's life and works."

*Journal of Indian History, Madras* (December 1936) : "We welcome this important publication not only as giving us a reliable text and valuable commentaries as also a translation, but as given in an elaborate critical Introduction, running through more than 125 pages, a vast mass

of information relating to the work as a Jain classic and of the history of Jainism itself."

* * * * *

೧೯೩೭ರಲ್ಲಿ ಯೋಗೀಂದುದೇವನ ಅಪಭ್ರಂಶ ಕೃತಿ '*ಪರಮಾತ್ಮ ಪ್ರಕಾಶ*'ವನ್ನು ಉಪಾಧ್ಯೆಯವರು ಸಂಪಾದಿಸಿದರು. ಜೈನ ಅಧ್ಯಾತ್ಮದ ಸ್ವರೂಪವನ್ನು ಅತ್ಯಂತ ವಿಶದವಾಗಿ ಪ್ರಸ್ತಾವನೆಯಲ್ಲಿ ಉಪಾಧ್ಯೆ ವಿವರಿಸಿದ್ದಾರೆ. '*ಪರಮಾತ್ಮ ಪ್ರಕಾಶ*' ಕೃತಿಯ ಜನಪ್ರಿಯತೆಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಪ್ರಾಚ್ಯ ಅಧ್ಯಯನ ಕ್ಷೇತ್ರದಲ್ಲಿ ಈ ಕೃತಿ ಹೊಂದಿರುವ ಮೌಲ್ಯವನ್ನು ಉಪಾಧ್ಯೆ ವಿವೇಚಿಸುತ್ತಾರೆ. ಬ್ರಹ್ಮದೇವನಿಂದ ಸಿದ್ಧವಾದ ಸಂಸ್ಕೃತ ವ್ಯಾಖ್ಯಾನದ ಪಾಠವನ್ನು ಆಧರಿಸಿ *ಪರಮಾತ್ಮ ಪ್ರಕಾಶ* ಪಠ್ಯದ ಸ್ವರೂಪವನ್ನು ಉಪಾಧ್ಯೆ ಖಚಿತಪಡಿಸಿಕೊಳ್ಳಲೆತ್ನಿಸಿದ್ದಾರೆ. ಇಡೀ ಕೃತಿಯ ಸಾರಾಂಶವನ್ನು ಸವಿಸ್ತರವಾಗಿ ಉಪಾಧ್ಯೆ ನೀಡಿದ್ದಾರೆ.

ಈ ಕೃತಿಯು ಉದ್ದೇಶ ಹಾಗೂ ಸಾಫಲ್ಯವನ್ನು ಕುರಿತ ನಿರ್ಣಯಕ್ಕೆ ಬರಲು ಸಾಧಾರವಾಗಿ ಐತಿಹಾಸಿಕ ವ್ಯಕ್ತಿಗಳ ಉಲ್ಲೇಖಗಳನ್ನು ಹಾಗೂ ಕೃತಿ ರಚನಾ ಸಂದರ್ಭದ ಅರಿವನ್ನು ಉಪಾಧ್ಯೆ ಅವರು ಬಳಸಿಕೊಳ್ಳುತ್ತಾರೆ. ಆಧ್ಯಾತ್ಮ ವಸ್ತುವನ್ನು ಕೃತಿಕಾರ ನಿರ್ವಹಿಸಿರುವ ಸ್ವರೂಪವನ್ನು ವಿವರಿಸುತ್ತಾರೆ. ಉಪಮೆಗಳ ಬಳಕೆ, ಶೈಲಿ, ಛಂದಸ್ಸುಗಳ ಬಗ್ಗೆ ಇಲ್ಲಿ ವಿವೇಚಿಸಲಾಗಿದೆ. ಪರಂಪರೆಯೊಳಗಿನ ಪೂರ್ವ ಕೃತಿಗಳು *ಪರಮಾತ್ಮ ಪ್ರಕಾಶ*ದ ಮೇಲೆ ಬೀರಿರುವ ಪ್ರಭಾವವನ್ನು ಗುರುತಿಸಲು ಇಲ್ಲಿ ಯತ್ನಿಸಲಾಗಿದೆ. ಇದನ್ನು ಆಧರಿಸಿ ಜೈನ ಸಾಹಿತ್ಯದಲ್ಲಿ ಯೋಗೀಂದುವಿನ ಸ್ಥಾನ ನಿರ್ಣಯ ಮಾಡಲಾಗಿದೆ.

ಪರಮಾತ್ಮ ಪ್ರಕಾಶದ ತಾತ್ವಿಕತೆ ಹಾಗೂ ಆಧ್ಯಾತ್ಮದ ಬಗೆಗೆ ಸುದೀರ್ಘ ವಿವೇಚನೆಯನ್ನು ಉಪಾಧ್ಯೆ ಕೈಗೊಳ್ಳುತ್ತಾರೆ. ವ್ಯವಹಾರ ಹಾಗೂ ನಿಶ್ಚಯ ನಯಗಳ ಆವಶ್ಯಕತೆ ಕುರಿತ ವಿವೇಚನೆ ಇಲ್ಲಿದೆ. ಆತ್ಮ, ಪರಮಾತ್ಮ, ಕರ್ಮಗಳ ಸ್ವರೂಪವನ್ನು ಇಲ್ಲಿ ಸ್ಪಷ್ಟೀಕರಿಸುತ್ತಾರೆ. ಯೋಗೀಂದುವಿನ 'ಪರಮಾತ್ಮ' ಪರಿಕಲ್ಪನೆಯನ್ನು ಉಪನಿಷತ್ತಿನ 'ಬ್ರಹ್ಮ'ನೊಂದಿಗೆ ಹೋಲಿಸಿ ಅವರೆಡರ ವೈಶಿಷ್ಟ್ಯವನ್ನೂ ವ್ಯತ್ಯಾಸವನ್ನೂ ಉಪಾಧ್ಯೆ ತಿಳಿಸುತ್ತಾರೆ. ಆತ್ಮ-ಪರಮಾತ್ಮ ಸಂಯೋಗ ವನ್ನು ಕುರಿತ ಯೋಗೀಂದುವಿನ ವಿಚಾರವನ್ನು ಉಪನಿಷತ್ತಿನಲ್ಲಿನ ವಿಚಾರದೊಂದಿಗೆ ಉಪಾಧ್ಯೆ ತೌಲನಿಕವಾಗಿ ವಿವೇಚಿಸುತ್ತಾರೆ. ಸಂಸಾರ-ಮೋಕ್ಷ, ಮೋಕ್ಷ ಮಾರ್ಗವಾಗಿ ಧ್ಯಾನದ ಸ್ವರೂಪವನ್ನು ಇಲ್ಲಿ ವಿವರಿಸಲಾಗಿದೆ. ಅನುಭಾವದ ವಿವಿಧ ಅಂಶಗಳು ಜೈನಧರ್ಮದಲ್ಲಿ ಪ್ರಕಟಗೊಂಡಿರುವುದರ ಬಗ್ಗೆ ಚರ್ಚಿಸಿದ್ದಾರೆ. ಪಾಪ-ಪುಣ್ಯಗಳ ಮೌಲ್ಯವಿವೇಚನೆ, ಜ್ಞಾನದ ಮಹತ್ವ, ಕರ್ಮಫಲದ ಬಗೆಗಿನ ಧೋರಣೆಗಳನ್ನು ವಿಸ್ತಾರವಾಗಿ ಉಪಾಧ್ಯೆ ಚರ್ಚಿಸುತ್ತಾರೆ. ಮೋಕ್ಷಾಕಾಂಕ್ಷಿಯ ಮನೋನೈತಿಕ ಅರ್ಹತೆಗಳನ್ನು ಅವರು ಸ್ಪಷ್ಟೀಕರಿಸುತ್ತಾರೆ.

ಹೇಮಚಂದ್ರನ ವ್ಯಾಕರಣದ ಹಿನ್ನೆಲೆಯಲ್ಲಿ ಪರಮಾತ್ಮ ಪ್ರಕಾಶದ ಅಪಭ್ರಂಶ ಭಾಷೆಯ ಸ್ವರೂಪವನ್ನು ಉಪಾಧ್ಯೆ ವಿವರಪೂರ್ಣವಾಗಿ ಚರ್ಚಿಸುತ್ತಾರೆ.

ಯೋಗೀಂದು ಕವಿಯ ಬಗೆಗಿನ ಉಪಾಧ್ಯೆಯವರ ಚರ್ಚೆ ಸ್ವಾರಸ್ಯ ಪೂರ್ಣವಾಗಿದೆ. ಜೋಇಂದು ಎಂಬ ಹೆಸರಿನ ಸಂಸ್ಕೃತ ರೂಪ ಯೋಗೀಂದ್ರ ಎಂದಿರದೆ ಯೋಗೀಂದು ಎಂದು ಉಪಾಧ್ಯೆ

ತೀರ್ಮಾನಿಸುತ್ತಾರೆ. ಯೋಗೀಂದುವಿನ ಕೃತಿಗಳಾದ *ಪರಮಾತ್ಮ ಪ್ರಕಾಶ, ಯೋಗಸಾರ, ಸಾದಯಧಮ್ಮ ದೋಹಾ, ದೋಹಾಪಾಹುಡ, ಅಮೃತಾಶೀಥಿ* ಮತ್ತು *ನಿಜಾತ್ಮಾಷ್ಟಕ*ಗಳ ಸ್ಥೂಲ ಪರಿಚಯವನ್ನು ಉಪಾಧ್ಯೆ ನೀಡುತ್ತಾರೆ. ಕವಿಯ ಕಾಲದ ಪೂರ್ವ ಹಾಗೂ ಅಂತಿಮ ಗಡಿಯನ್ನು ಸಾಧಾರವಾಗಿ ಉಪಾಧ್ಯೆ ಸ್ಥಾಪಿಸುತ್ತಾರೆ.

*ಪರಮಾತ್ಮ ಪ್ರಕಾಶ*ದ ಬಗ್ಗೆ ಬಂದಿರುವ ಮಲಧಾರಿ ಬಾಲಚಂದ್ರನ ಕನ್ನಡ ವ್ಯಾಖ್ಯಾನವು ಬ್ರಹ್ಮದೇವನ ವ್ಯಾಖ್ಯಾನಕ್ಕಿಂತ ಭಿನ್ನವೂ ಸ್ವತಂತ್ರವೂ ಆಗಿರುವುದನ್ನು ಉಪಾಧ್ಯೆ ವಿವೇಚಿಸುತ್ತಾರೆ. ಮಲಧಾರಿ ಬಾಲಚಂದ್ರ ಹಾಗೂ ಬ್ರಹ್ಮದೇವನ ಕಾಲವನ್ನು ಇಲ್ಲಿ ನಿರ್ಣಯಿಸಲಾಗಿದೆ. ಮಲಧಾರಿ ಬಾಲಚಂದ್ರನೇ ಅಲ್ಲದೆ ಅಧ್ಯಾತ್ಮಿ ಬಾಲಚಂದ್ರನೂ ವ್ಯಾಖ್ಯಾನ ಬರೆದಿರುವುದರ ಬಗ್ಗೆ ಇಲ್ಲಿ ವಿವರಗಳಿವೆ. ಈ ಸಂಪಾದಿತ ಕೃತಿಯು ಅಪಭ್ರಂಶ ಭಾಷೆ, ಸಾಹಿತ್ಯಗಳ ಅಧ್ಯಯನಕ್ಕೂ ಜೈನ ಅನುಭಾವ ಪರಂಪರೆಯ ಇತಿಹಾಸ ರಚನೆಗೂ ಸಂದ ಮಹತ್ವದ ಕೊಡುಗೆ ಎಂದು ಜರ್ಮನಿಯ ಡಾ. ಲುಡ್‌ವಿಗ್ ಅಲ್ಸ್‌ಡಾಫ್ ಹಾಗೂ ಎಡಿನ್‌ಬರೊ ವಿಶ್ವವಿದ್ಯಾನಿಲಯದ ಡಾ. ಎ.ಬಿ. ಕೀತ್ ಶ್ಲಾಘಿಸಿದ್ದಾರೆ. ಹೇಮಚಂದ್ರನ ವ್ಯಾಕರಣದೊಂದಿಗೆ *ಪರಮಾತ್ಮ ಪ್ರಕಾಶ*ದ ಭಾಷೆಯ ತೌಲನಿಕ ಅಧ್ಯಯನವು ಇಂಡೋ-ಆರ್ಯನ್ ಭಾಷಾ ವಿಜ್ಞಾನದ ವಿದ್ಯಾರ್ಥಿಗಳಿಗೆ ಉಪಯುಕ್ತ ಎಂಬ ಅನಿಸಿಕೆಯನ್ನು ಪ್ರೊ. ಎಲ್.ವಿ. ರಾಮಸ್ವಾಮಿ ಅಯ್ಯರ್ ವ್ಯಕ್ತಪಡಿಸಿದ್ದಾರೆ.

* * * * *

ಡಾ. ಉಪಾಧ್ಯೆ ಅವರಿಗೆ ತಾವು ಸಂಪಾದಿಸಿದ ಜಟಾಸಿಂಹ ನಂದಿಯ *ವರಾಂಗಚರಿತ*ದ ಬಗ್ಗೆ ಬಹಳ ಸಂತೋಷವಿತ್ತು. ಏಕೆಂದರೆ

ಇದು ಒಟ್ಟಾರೆ ಸಂಸ್ಕೃತ ಕಾವ್ಯಸಾಹಿತ್ಯಕ್ಕೂ ವಿಶೇಷವಾಗಿ ಜೈನ ಸಾಹಿತ್ಯಕ್ಕೂ ದೊರಕಿದ ಮಹಾನ್ ಕೊಡುಗೆಯಾಗಿದೆ. ಕ್ರಿ.ಶ. ಏಳನೇ ಶತಮಾನಕ್ಕೆ ಸೇರುವ ಈ ಕಾವ್ಯವನ್ನು ಮೊತ್ತ ಮೊದಲ ಬಾರಿಗೆ ಡಾ. ಉಪಾಧ್ಯೆ ಅವರು ಬೆಳಕಿಗೆ ತಂದರು. '*ವರಾಂಗಚರಿತ*' ಕ್ರಿ.ಶ. ಏಳನೇ ಶತಮಾನಕ್ಕೆ ಸೇರಿದ್ದು ಭಗವಜ್ಜಿನಸೇನಾಚಾರ್ಯರ *ಮಹಾಪುರಾಣ*ಕ್ಕಿಂತಲೂ ಪ್ರಾಚೀನ ಕಾವ್ಯವಾಗಿದೆ. ಎರಡು ಓಲೆಗರಿ ಪ್ರತಿಗಳನ್ನಾಧರಿಸಿ ಈ ಕೃತಿಯನ್ನು ಸಂಪಾದಿಸಿದ್ದಾರೆ. ಗ್ರಂಥದ ರಚನೆಯ ಸಂವಿಧಾನ, ಗ್ರಂಥದ ಕರ್ತೃತ್ವ, ಕರ್ತೃವಾದ ಜಟಾಸಿಂಹ ನಂದ್ಯಾಚಾರ್ಯ, ಅವರ ಕಾಲ ದೇಶಗಳನ್ನು ಚರ್ಚಿಸಿದ್ದಾರೆ. ಕಾವ್ಯದ ವಸ್ತುವಿನ ವಿವೇಚನೆ ; ಕಾವ್ಯ ಲಕ್ಷಣಗಳನ್ನುಳ್ಳ ಇದು ಒಂದು ಧರ್ಮಕಥೆ. ಇದರಲ್ಲಿರುವ ಜೈನ ಸಿದ್ಧಾಂತ ವಿಚಾರಗಳ ವಿವರಗಳು, ವಿವಿಧ ವಾದಗಳ ಚರ್ಚೆ, ಕೃತಿಯ ಸಮಕಾಲೀನ ಸಮಾಜೋ-ರಾಜಕೀಯ ಹಿನ್ನೆಲೆಯ ಕೆಲವು ವಿವರಗಳ ಅಧ್ಯಯನ, ಜಟಾಸಿಂಹನಂದಿಯ ಕೃತಿಯ ಮೇಲೆ ಆಗಿರುವ ಅಶ್ವಘೋಷನ ಪ್ರಭಾವ, ಉತ್ತರಕಾಲೀನ ಜೈನ ಕವಿಗಳ ಮೇಲೆ *ವರಾಂಗಚರಿತ*ದ ಪ್ರಭಾವ, *ವರಾಂಗಚರಿತ*ದಲ್ಲಿ ಕಂಡು ಬರುವ ವ್ಯಾಕರಣ ವೈಶಿಷ್ಟ್ಯಗಳು, ಛಂದಸ್ಸು, ಶೈಲಿ ಇವುಗಳನ್ನು ಸಾಕಷ್ಟು ವಿವರವಾಗಿಯೇ ಅಧ್ಯಯನ ಮಾಡಿದ್ದಾರೆ. ವರ್ಧಮಾನ ಕವಿಯ ಸಂಸ್ಕೃತ *ವರಾಂಗಚರಿತ*, ಧರಣಿ ಪಂಡಿತನ ಕನ್ನಡ *ವರಾಂಗಚರಿತೆ* ಲಾಲ್‌ಚಂದ ಮತ್ತು ಕಮಲನಯನರ ಹಿಂದಿ *ವರಾಂಗಚರಿತ*ಗಳ ಬಗ್ಗೆಯು ಮಾಹಿತಿ ನೀಡಿದ್ದಾರೆ. ಉಪಾಧ್ಯೆಯವರು ಈ ಕೃತಿಯನ್ನು ಸಂಪಾದಿಸುವಲ್ಲಿ ಒಬ್ಬ ಶ್ರೇಷ್ಠ ವಿದ್ವಾಂಸ ಅನುಸರಿಸುವ ನಿಯಮಗಳನ್ನೇ ಅನುಸರಿಸಿದ್ದಾರೆ. ಹಸ್ತ ಪ್ರತಿಗಳೆರಡರಲ್ಲೂ ಉಭಯ ಸಾಮಾನ್ಯವಾಗಿ ಕಂಡು ಬರುವ ತಪ್ಪು

ಪಾಠಗಳನ್ನು ಅವರು ಎಲ್ಲಿಯೂ ತಿದ್ದಲು ಹೋಗಿಲ್ಲ. ಆದರೆ ಸರಿಯಾಗಿರಬೇಕಾದ ಪಾಠವನ್ನು ಅಡಿ ಟಿಪ್ಪಣಿಯಲ್ಲಿ ಅತ್ಯಂತ ಉಚಿತವಾಗಿ ಸೂಚಿಸಿದ್ದಾರೆ.

ಈ ಕೃತಿಯನ್ನು ಕುರಿತಂತೆ ಡಬ್ಲ್ಯು ಶುಬ್ರಿಂಗ್, ಒ.ಸ್ಟೈಯಿನ್, ಎಸ್.ಎಂ. ಕತ್ರೆ, ಪಿ.ಎಲ್.ವೈದ್ಯ, ಎಸ್.ಕೆ.ಡೇ, ಎಚ್.ಡಿ. ವೇಲಣಕರ್ ಮೊದಲಾದ ದೇಶ ವಿದೇಶಗಳ ವಿದ್ವಾಂಸರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ ಡಾ. ಉಪಾಧ್ಯೆ ಅವರ ಶ್ರಮ, ಶಿಸ್ತು, ಸಂಯಮ, ವಿದ್ವತ್ತನ್ನು ಕೊಂಡಾಡಿದ್ದಾರೆ.

* * * * *

ಸುಮಾರು ಮೂವತ್ತು ಮೌಲಿಕ ಪ್ರಾಚೀನ ಪ್ರಾಕೃತ ಮತ್ತು ಸಂಸ್ಕೃತ ಗ್ರಂಥಗಳ ಸಂಪಾದಕರಾಗಿ ೧೬೦ಕ್ಕೂ ಹೆಚ್ಚು ಸಂಶೋಧನ ಪ್ರಬಂಧಗಳ ಲೇಖಕರಾಗಿ ಉಪಾಧ್ಯೆ ಅವರು ಈ ದೇಶ ೨೦ನೇ ಶತಮಾನದಲ್ಲಿ ಕಂಡ ದೊಡ್ಡ ಪ್ರಾಚ್ಯವಿದ್ಯಾ ವಿದ್ವಾಂಸರಾಗಿದ್ದಾರೆ.

ಉಪಾಧ್ಯೆ ಅವರು ತಮ್ಮ ಬರವಣಿಗೆಗಳ ಮೂಲಕ ಮೊದಲ ಬಾರಿಗೆ ಅನೇಕ ಹೊಸ ವಿಷಯಗಳನ್ನು ಅಸಂದಿಗ್ಧವಾಗಿ ತಿಳಿಸಿಕೊಟ್ಟಿದ್ದಾರೆ: ಪುರುಷವ್ರತ ಎಂಬ ಶಬ್ದದ ನಿಶ್ಚಿತ ಅರ್ಥ, ಅಸಗ ಕವಿಯ ಕಾಲ, ಅನೇಕ ಜೈನ ಶಾಸನಗಳ ಪ್ರಾರಂಭದಲ್ಲಿ ಬರುವ "ಶ್ರೀಮತ್ಪರಮಗಂಭೀರ ಸ್ಯಾದ್ವಾದಮೋಘಲಾಂಛನಮ್" ಎಂಬ ಶ್ಲೋಕದ ಆಕರ, ಯಾಪನೀಯ ಸಂಘದ ವಿಚಾರ, ಗೊಮ್ಮಟ ಶಬ್ದದ ಅರ್ಥ, ನೇಮಿಚಂದ್ರನ ಲೀಲಾವತೀ ಪ್ರಬಂಧಕ್ಕೆ ಸ್ಫೂರ್ತಿಯಾದ ಕಾವ್ಯ ಪ್ರಾಕೃತ *ಲೀಲಾವಈ* ಮೊದಲಾದವನ್ನು ತಿಳಿಸಿ ಕೊಡುವುದರ ಮೂಲಕ ವಿದ್ವಾಂಸರಿಗೆ ಸರಿದಾರಿ ತೋರಿಸಿದ್ದಾರೆ.

ಆ. ನೇ. ಉಪಾಧ್ಯೆ ಅವರ ಸಂಪಾದಿತ ಬಹುತೇಕ ಗ್ರಂಥಗಳ ವಿಸ್ತಾರವಾದ ಮುನ್ನುಡಿಗಳು, ಅವರ ಬಿಡಿ ಸಂಶೋಧನ ಲೇಖನಗಳು ಕನ್ನಡ ಭಾಷೆ, ಸಾಹಿತ್ಯ ಮೊದಲಾದವುಗಳ ಬಗ್ಗೆ ಕನ್ನಡೇತರರಿಗೆ ಮೊದಲ ಬಾರಿಗೆ ಇಂಗ್ಲಿಷಿನಲ್ಲಿ ತಿಳಿಸಿಕೊಡುವುದರಿಂದ ಕೂಡ ಉಪಾಧ್ಯೆ ಅವರು ನಮಗೆ ಮಹತ್ವದ ವಿದ್ವಾಂಸರಾಗಿ ಕಾಣಿಸುತ್ತಾರೆ.

ಉಪಾಧ್ಯೆಯವರು ರಾಷ್ಟ್ರದ ಪ್ರತಿಷ್ಠಿತ ಪ್ರಕಾಶನ ಸಂಸ್ಥೆಗಳ ಮುಖ್ಯ ಸಂಪಾದಕರಾಗಿ ಅನೇಕ ಮಹತ್ವದ ಕೃತಿಗಳು ಬೆಳಕು ಕಾಣುವಂತೆ ಮಾಡಿರುವರು. ಸೋಲಾಪುರದ ಜೀವರಾಜ ಜೈನಗ್ರಂಥಮಾಲೆ, ಬನಾರಸದ ಜ್ಞಾನಪೀಠ ಮೂರ್ತಿದೇವ ಜೈನ ಗ್ರಂಥ ಮಾಲೆಗಳ ಪುಸ್ತಕ ಪ್ರಕಟನಾ ಯೋಜನೆಯ ರೂವಾರಿಯೂ ಅವರೇ, ಜೈನ ಸಿದ್ಧಾಂತ ಭಾಸ್ಕರ, ಜೈನ ಆಂಟಿಕ್ವೆರಿಗಳ ಸಹ ಸಂಪಾದಕರಾಗಿದ್ದರು. ಡಾ. ಹೀರಾಲಾಲ್ ಜೈನರ ಜೊತೆಗೂಡಿ *ಧವಲಾ* ವ್ಯಾಖ್ಯಾನ ಸಹಿತಾದ *ಷಟ್ಖಂಡಾಗಮ*ವನ್ನು ಉಪಾಧ್ಯೆಯವರು ಸಂಪಾದಿಸಿ ಕೊಟ್ಟಿದ್ದಾರೆ. ಪುಣೆಯ ಓರಿಯಂಟಲ್ *ಲಿಟರರಿ ಡೈಜೆಸ್ಟ್* ಎಂಬ ಮಾಸಿಕ ಪತ್ರಿಕೆಯ ಸಹ ಸಂಪಾದಕರಾಗಿ ಉಪಾಧ್ಯೆಯವರು ಕಾರ್ಯ ನಿರ್ವಹಿಸಿದ್ದಾರೆ. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೆ 'ಜಿನವಿಜಯ' ಕನ್ನಡ ಮಾಸಪತ್ರಿಕೆಯ ಸಂಪಾದಕರಾಗಿ ಕೆಲಸ ಮಾಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು ಸಮಿತಿಯ ಸದಸ್ಯರಾಗಿ ಗಣನೀಯ ಸೇವೆಯನ್ನು ಅವರು ಸಲ್ಲಿಸಿದ್ದಾರೆ.

"ವಿಶೇಷತಃ ನಮ್ಮ ವೈಸ್-ಛಾನ್ಸಲರ್ ಪ್ರೊ. ಜವರೇಗೌಡರು ವ್ಯಕ್ತಿಶಃ ಇದರಲ್ಲಿ ಲಕ್ಷ್ಯ ಹಾಕದಿದ್ರೆ ಇಷ್ಟು ಉತ್ಸಾಹ ಜನಕ್ಕೆ ಬರ್ತಿದ್ದಿಲ್ರಿ"- ಎಂದು ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ಇಲಾಖೆಯ ಪ್ರಥಮ ಪ್ರಾಧ್ಯಾಪಕರಾಗಿ ತಾವು ಬಂದ

ಸಂದರ್ಭವನ್ನು ಉಪಾಧ್ಯೆಯವರು ಉಲ್ಲೇಖಿಸಿದ್ದಾರೆ. ದಕ್ಷಿಣ ಭಾರತದಲ್ಲಿ, ಅದರಲ್ಲಿಯೂ ಕರ್ನಾಟಕದಲ್ಲಿ ಪ್ರಾಕೃತ ಭಾಷೆ ಸಾಹಿತ್ಯಗಳ ಅಧ್ಯಯನಕ್ಕೆ ಖಚಿತವಾದ ವೈಧಾನಿಕತೆಯನ್ನು ರೂಢಿಸುವಲ್ಲಿ ಉಪಾಧ್ಯೆಯವರ ಪಾತ್ರ ಮಹತ್ತರವಾದುದು. ದಕ್ಷಿಣ ಕರ್ನಾಟಕದೊಳಗೆ ಏಕೈಕ ತಾಳೆಪ್ರತಿಯಲ್ಲಿದ್ದ *ಧವಳ, ಜಯಧವಳ* ಹಾಗೂ *ಮಹಾಧವಳ* ಗ್ರಂಥಗಳ ಬಗ್ಗೆ ಉಪಾಧ್ಯೆಯವರಿಗಿದ್ದ ಅರಿವು ಕ್ರಿಯಾಶೀಲವಾಗಿತ್ತು. ಡಾ. ಹೀರಾಲಾಲ್ ಅವರೊಡನೆ ಕೂಡಿ ಪ್ರತಿಯೊಂದೂ ಐದುನೂರು ಪುಟ ವ್ಯಾಪ್ತಿಯ ಹದಿನಾರು ಸಂಪುಟಗಳಲ್ಲಿ ಅವನ್ನು ಇಪ್ಪತ್ತು ವರ್ಷದ ಅವಧಿಯಲ್ಲಿ ಉಪಾಧ್ಯೆ ಸಂಪಾದಿಸಿದರು. ಪ್ರಾಚೀನ ಕನ್ನಡ ಸಾಹಿತ್ಯ ಅಧ್ಯಯನಕ್ಕೆ ಸಂಸ್ಕೃತದೊಂದಿಗೆ ಪ್ರಾಕೃತಜ್ಞಾನವೂ ಅತ್ಯಗತ್ಯವೆಂದು, ಆ ನಿಟ್ಟಿನಲ್ಲಿ ಪ್ರಾಕೃತ ಅಧ್ಯಯನದ ಪಠ್ಯವಿನ್ಯಾಸವನ್ನು ರೂಪಿಸಿದರು.

* * * * *

ಡಾ. ಉಪಾಧ್ಯೆ ಅವರಿಗೆ ಸಂಬಂಧಿಸಿದ ಕೆಲವು ಪ್ರಸಂಗ (anecdotes) ಗಳನ್ನು ಅವರ ವಿದ್ಯಾರ್ಥಿ ಶ್ರೀ ಶುಭಚಂದ್ರ ಅವರ ಉಪನ್ಯಾಸಗಳಿಂದ ಆಯ್ದು ಇಲ್ಲಿ ದಾಖಲು ಮಾಡಲಾಗಿದೆ :

i. ಗಂಗೋತ್ರಿಯ ಪ್ರಾಧ್ಯಾಪಕರೊಬ್ಬರು ಒಮ್ಮೆ ಕುಲಪತಿಗಳಾದ ಪ್ರೊ. ದೇ.ಜ.ಗೌ. ಅವರನ್ನು ಭೇಟಿ ಮಾಡಲು ಹೋಗಿದ್ದರು. ಅವರ ಮಾತುಕತೆಗಳು ಮುಗಿದ ಮೇಲೆ "ಜೈನಾಲಜಿಯ ಪ್ರೊಫೆಸರ್ ಉಪಾಧ್ಯೆ ಅವರನ್ನು ಅರಸೀಕೆರೆ ರೈಲ್ವೆ ಪ್ಲಾಟ್‌ಫಾರಂನಲ್ಲಿ ನೋಡಿದೆ. ಅಲ್ಲಿ ಅವರು ಕಟ್ಟೆಯ ಮೇಲೆ ಕುಳಿತುಕೊಂಡು ಪ್ರೂಫ್ ನೋಡುತ್ತಿದ್ದರು" ಎಂದು ಹೇಳಿದರಂತೆ. ಇದನ್ನು ಕನ್ನಡ ಅಧ್ಯಯನ ಸಂಸ್ಥೆಯ ಒಂದು

ಸಮಾರಂಭದಲ್ಲಿ ಹೇಳಿದ ದೇ.ಜ.ಗೌ. ಅವರು ಇಂಥಾ ಕ್ರಿಯಾಶೀಲ ರಾದ ಪ್ರಾಧ್ಯಾಪಕರಿಂದಲೇ ವಿಶ್ವವಿದ್ಯಾನಿಲಯದ ಗೌರವ ಹೆಚ್ಚುವುದು ಎಂದು ತಿಳಿಸಿದರು. ಇದು ಉಪಾಧ್ಯೆ ಅವರು ಸಮಯಕ್ಕೆ ನೀಡುತ್ತಿದ್ದ ಮಹತ್ವವನ್ನು ತೋರಿಸುತ್ತದೆ. ಉಪಾಧ್ಯೆ ಅವರು ಕೊಲ್ಲಾಪುರದಿಂದ ಮೈಸೂರಿಗೆ ಬರಬೇಕಾದರೆ ಅರಸೀಕೆರೆಯಲ್ಲಿ ರೈಲನ್ನು ಬದಲಾಯಿಸ ಬೇಕಾಗುತ್ತಿತ್ತು. ಮೈಸೂರಿನ ರೈಲು ಹೊರಡುವವರೆಗೂ ಇದ್ದ ಸಮಯವನ್ನು ಪ್ರೂಫ್‌ಗಳನ್ನು ತಿದ್ದುವುದಕ್ಕೆ ಉಪಯೋಗಿಸುತ್ತಿದ್ದರು. ಅವರ ಬ್ಯಾಗಿನಲ್ಲಿ ಯಾವಾಗಲೂ ಅಚ್ಚಾಗುತ್ತಿದ್ದ ಗ್ರಂಥಗಳ ಪ್ರೂಫ್‌ಗಳು ಇದ್ದೇ ಇರುತ್ತಿದ್ದವು.

ii. ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ಮತ್ತು ಸಂಶೋಧನ ವಿಭಾಗವು ಡಾ. ಆ.ನೇ. ಉಪಾಧ್ಯೆ ಅವರ ಕಾಲದಲ್ಲಿ ಪ್ರಾರಂಭವಾದಾಗ ಕನ್ನಡ ಅಧ್ಯಯನ ಸಂಸ್ಥೆಯ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಕನ್ನಡ ಅಧ್ಯಯನ ಸಂಸ್ಥೆಯ ಪರಿಸರದಲ್ಲಿಯೇ ಡಾ. ಉಪಾಧ್ಯೆ ಅವರಂಥ ವಿದ್ವಾಂಸರು ಇದ್ದರೆ ಅವರಿಂದ ಇತರ ವಿದ್ವಾಂಸರಿಗೂ ಪ್ರಯೋಜನ ವಾಗುತ್ತದೆ ಎಂಬುದು ಪ್ರೊ. ದೇಜಗೌ ಮತ್ತು ಡಾ.ಹಾಮಾನಾ ಅವರ ಉದ್ದೇಶವಾಗಿತ್ತು. ೧೯೭೪ರಲ್ಲಿ ಹಾಮಾನಾ ಅವರು 'ಅಧ್ಯಯನ ಸಂಸ್ಥೆಯ ಹಾಗೂ ಜೈನಾಲಜಿ ವಿಭಾಗದ ಸಂಶೋಧನ ವಿದ್ಯಾರ್ಥಿಗಳ ಕೂಟವನ್ನು ಮಾಡಿಕೊಳ್ಳಿ. ಅದನ್ನು ಡಾ. ಉಪಾಧ್ಯೆ ಅವರಿಂದ ಉದ್ಘಾಟಿಸೋಣ' ಎಂದು ಜೈನಾಲಜಿಯ ಸಂಶೋಧನ ವಿದ್ಯಾರ್ಥಿ ಯಾಗಿದ್ದ ಶ್ರೀ ಶುಭಚಂದ್ರ ಅವರಿಗೆ ಹೇಳಿದರು. ಉದ್ಘಾಟನಾ ಸಮಾರಂಭದಲ್ಲಿ ಹಾಮಾನಾ ಅವರು ಪ್ರಸ್ತಾವನೆಯ ಮಾತುಗಳ ನ್ನಾಡುತ್ತ, ಸಂಶೋಧಕರು ತಮ್ಮ ಲೇಖನಗಳನ್ನು ಪ್ರಕಟಿಸಬೇಕಾದ

ಅವಶ್ಯಕತೆಯನ್ನು ತಿಳಿಸುತ್ತ ಅಮರಿಕೆಯ ಒಂದು ನಿದರ್ಶನವನ್ನು ಹೇಳಿದರು. ಅಮೆರಿಕೆಯಲ್ಲಿ ಅಧ್ಯಕ್ಷನಾಗಿದ್ದ ಉಡ್ರೋವಿಲ್ಸನ್ನನ ಮೊಮ್ಮಗ ವಿಶ್ವವಿದ್ಯಾನಿಲಯವೊಂದರಲ್ಲಿ ಅಧ್ಯಾಪಕನಾಗಿ ಕೆಲಸ ಮಾಡುತ್ತಿದ್ದ. ಆ ವಿಶ್ವವಿದ್ಯಾನಿಲಯ ಅವನನ್ನು ಕೆಲಸದಿಂದ ತೆಗೆದು ಹಾಕಿಬಿಟ್ಟಿತ್ತು. ಕಾರಣ ಅವನು ಆ ಹಿಂದಿನ ಶೈಕ್ಷಣಿಕ ವರ್ಷದಲ್ಲಿ ಏನನ್ನೂ ಪ್ರಕಟಿಸಿರಲಿಲ್ಲ. ವಿದ್ವತ್ತಿನ ಜಗತ್ತಿನಲ್ಲಿ Publish or Perish ಎಂಬುದು ನಿಯಮವಾಗಿದೆ. ಆದುದರಿಂದ ಸಂಶೋಧಕರಾದ ನೀವುಗಳು ಹೆಚ್ಚು ಹೆಚ್ಚು ಲೇಖನ, ಪುಸ್ತಕಗಳನ್ನು ಪ್ರಕಟಿಸಬೇಕು ಎಂದು ಕಿವಿ ಮಾತು ಹೇಳಿದರು. ಉಪಾಧ್ಯೆ ಅವರಿಗೆ ಹಾಮಾನಾ ಅವರ ಬಗ್ಗೆ ವಿಶೇಷವಾದ ಪ್ರೀತಿಯಿತ್ತು. ಯಾವಾಗಲೂ "ನಾಯಕ್ ಈಸ್ ಮೈ ಲೋಕಲ್ ಗಾರ್ಡಿಯನ್" ಎಂದು ಹೇಳುತ್ತಿದ್ದರು. ಅಂದ ಮಾತ್ರಕ್ಕೆ ಹಾಮಾನಾ ಹೇಳಿದ್ದನ್ನೆಲ್ಲಾ ಸೈದ್ಧಾಂತಿಕವಾಗಿ ಒಪ್ಪಿಕೊಳ್ಳುವ ಯಾವ ಅನಿವಾರ್ಯತೆಯೂ ಅವರಿಗಿರಲಿಲ್ಲ. ಹಾಮಾನಾ ಅವರ ನಂತರ ಉಪಾಧ್ಯೆ ಅವರು ಮಾತನಾಡಿದರು. ಸಂಶೋಧಕರು ಲೇಖನ ಪುಸ್ತಕ ಬರೆಯಬೇಕು. ಆದರೆ ಅದನ್ನು ತಕ್ಷಣವೇ ಪ್ರಕಟಿಸಿಬಿಡಬೇಕು ಎಂಬ ಆತುರ ಸಂಶೋಧಕನಿಗಿರಬಾರದು. ಲೇಖನದ ಬಗ್ಗೆ ಆಳವಾಗಿ ಚಿಂತಿಸಬೇಕು. ವಿವಿಧ ಮಗ್ಗುಲುಗಳಿಂದ ಶೋಧಿಸಬೇಕು. ನಂತರ ಮಾತ್ರವೇ ಪ್ರಕಟಿಸಬೇಕು. ನಾಯಕರು ಹೇಳಿದರು "Publish or Perish" ಅಂತ. ನಾ ಹೇಳ್ತೀನಿ. "People Published and Perished". ಆದ್ದರಿಂದ ಆತುರಪಡಬಾರದು ಎಂದು ಮನದಟ್ಟಾಗುವಂತೆ ತಿಳಿಸಿದರು.

iii. ಡಾ. ಉಪಾಧ್ಯೆ ಅವರು ಮೈಸೂರಿಗೆ ಬರಲು ಒಪ್ಪಿಕೊಂಡಾಗ ಕೆಲವು ಅವಶ್ಯಕ ಸೌಲಭ್ಯಗಳನ್ನು ನೀಡಲೇಬೇಕೆಂದು ವಿಶ್ವ

ವಿದ್ಯಾನಿಲಯವನ್ನು ಕೇಳಿದ್ದರು. ಪದವೀಧರ ಶೀಘ್ರ ಲಿಪಿಕಾರರೊಬ್ಬರನ್ನು ತಮ್ಮ ಕಛೇರಿಗೆ ಒದಗಿಸಬೇಕೆಂಬುದು ಅವುಗಳಲ್ಲೊಂದು. ಒಬ್ಬರು ಟೈಪಿಸ್ಟ್, ಒಬ್ಬರು ಗುಮಾಸ್ತರು, ಒಬ್ಬ ಸೇವಕ ಹಾಗೂ ಒಬ್ಬ ಶೀಘ್ರ ಲಿಪಿಕಾರ ಇಷ್ಟು ಬೋಧಕೇತರ ಸಿಬ್ಬಂದಿ ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗದಲ್ಲಿದ್ದರು. ಶೀಘ್ರಲಿಪಿಕಾರರು ತಮ್ಮ ಅನುಭವವನ್ನು ಹೇಳಿಕೊಳ್ಳುವಾಗ, ಭಾರತದಲ್ಲಿ ಎಷ್ಟು ವಿಶ್ವವಿದ್ಯಾನಿಲಯಗಳಿವೆ, ಅವುಗಳ ಹೆಸರು ಏನು ಎಂಬುದೆಲ್ಲಾ ಆ ವಿಭಾಗಕ್ಕೆ ಬಂದ ಮೇಲೆಯೇ ತಿಳಿದಿದ್ದು ಎಂದು ಹೇಳುತ್ತಿದ್ದರಂತೆ. ಅಂದರೆ ಉಪಾಧ್ಯೆ ಅವರಿಗೆ ಭಾರತದ ಬಹುತೇಕ ಎಲ್ಲ ವಿಶ್ವವಿದ್ಯಾನಿಲಯಗಳ ವಿದ್ವಾಂಸ- ಪ್ರಾಧ್ಯಾಪಕರೊಡನೆ ಒಂದಲ್ಲ ಒಂದು ರೀತಿಯ ಶೈಕ್ಷಣಿಕ ಕಾರಣಕ್ಕಾಗಿ ಸಂಪರ್ಕವಿತ್ತು. ಪತ್ರವ್ಯವಹಾರವಿತ್ತು. ಹಾಗಾಗಿ ಆ ಸ್ಟೆನೋಗೆ ಭಾರತದ ಬಹುತೇಕ ವಿಶ್ವವಿದ್ಯಾನಿಲಯಗಳ ಬಗ್ಗೆ ಮಾಹಿತಿ ಇತ್ತು.

iv. ಉಪಾಧ್ಯೆ ಅವರು ತಮ್ಮದೇ ಆದ ಒಂದು ಸ್ವಂತ ಟೈಪ್‌ರೈಟರ್ ಹೊಂದಿದ್ದರು. ಮಾನಸ ಗಂಗೋತ್ರಿಯಲ್ಲಿ ಅವರಿಗೆ ತರಗತಿಗಳು ಇರಲಿ ಇಲ್ಲದಿರಲಿ ಪ್ರತಿದಿನ ಬೆಳಗ್ಗೆ ಎಂಟಕ್ಕೆಲ್ಲಾ ವಿಭಾಗಕ್ಕೆ ಬರುತ್ತಿದ್ದರು. ಬಂದವರೇ ತಮ್ಮ ಲೇಖನಗಳನ್ನು, ಸ್ವಂತ ಪತ್ರಗಳನ್ನು ತಾವೇ ಟೈಪ್ ಮಾಡುತ್ತಿದ್ದರು. ಇದಕ್ಕಾಗಿ ಕಛೇರಿಯ ಟೈಪ್‌ರೈಟರನ್ನಾಗಲೀ, ಟೈಪಿಸ್ಟನ್ನಾಗಲೀ, ಶೀಘ್ರಲಿಪಿಕಾರನನ್ನಾಗಲೀ ಬಳಸಿಕೊಳ್ಳುತ್ತಿರಲಿಲ್ಲ. ಉಪಾಧ್ಯೆಯವರು ತಾವೇ ಟೈಪ್ ಮಾಡಿಕೊಳ್ಳುವ ವಿಚಾರ ಕುಲಪತಿ ದೇಜಗೌ ಅವರಿಗೆ ತಿಳಿಯಿತು. ಒಮ್ಮೆ ಅವರು ಉಪಾಧ್ಯೆ ಅವರೇ ನಿಮ್ಮ ಅವಶ್ಯಕತೆಗಾಗಿ ಸ್ಟೇನೋ ಒಬ್ಬರನ್ನು, ಒಬ್ಬ ಟೈಪಿಸ್ಟನ್ನು

ಕೊಟ್ಟಿದ್ದೇವಲ್ಲ. ನೀವೇ ಯಾಕೆ ಟೈಪ್ ಮಾಡಿಕೊಳ್ಳುತ್ತೀರಿ ? ಎಂದು ಕೇಳಿದರು. "ನನ್ನ ಸ್ವಂತ ಕೆಲಸಗಳನ್ನು ನಾನೇ ಮಾಡಿಕೊಳ್ತೀನ್ರಿ. ನೋಡಿ, ನಾನು ದಿಲ್ಲಿಯ ಡಾ. xxxxx ಅವರಿಗೆ ಒಂದು ಪತ್ರ ಬರೆದೆನ್ರಿ. ಅವರಿಂದ ಉತ್ತರ ನಿರೀಕ್ಷಿಸಿ ಒಂದು ತಿಂಗಳು ಕಾದಿನ್ರಿ. ಆಮೇಲೆ ಒಂದು ಸೆಮಿನಾರ್‌ಗೆ ದಿಲ್ಲಿಗೆ ಹೋದಾಗ ಅವರ ಭೆಟ್ಟಿ ಆತ್ರಿ. ನನ್ನ ಪತ್ರಕ್ಕೆ ನಿಮ್ಮಿಂದ ಉತ್ತರ ಬಂದಿಲ್ರಿ ಎಂದು ಹೇಳಿದೆ. ಅದಕ್ಕೆ ಅವರು, "I am very sorry Dr. Upadhye. I could not answer your letter, because my steno was on leave for last one month" ಎಂದರು. ಅದಕ್ಕೇ ನಾನು ನನ್ನ ಸ್ವಂತ ಕೆಲಸಕ್ಕೆ ಎರಡನೆಯವರನ್ನ ಅವಲಂಬಿಸೋಲ್ರಿ" ಎಂದು ತಿಳಿಸಿದರು. ಈ ಘಟನೆ ಡಾ. ಉಪಾಧ್ಯೆ ಅವರು ಕೆಲಸ ಮಾಡುತ್ತಿದ್ದ ರೀತಿಗೆ ಹಿಡಿದ ಕೈಗನ್ನಡಿ.

v. ಸಂಶೋಧನೆಗೆ ಸಂಬಂಧಿಸಿದಂತೆ ಡಾ. ಆ.ನೇ. ಉಪಾಧ್ಯೆ ಅವರ ಪತ್ರವ್ಯವಹಾರ ಎಷ್ಟು ವಿಸ್ತಾರವಾಗಿತ್ತೋ ಅಷ್ಟೇ ಶೀಘ್ರವೂ ಆಗಿರುತ್ತಿತ್ತು. ಅವರಿಗೆ ಯಾರೇ ಪತ್ರ ಬರೆದರೂ ಉತ್ತರವನ್ನು ಬೇಗ ಮರು ಟಪಾಲಿನಲ್ಲಿಯೇ ಕಳುಹಿಸುತ್ತಿದ್ದರು. ಉತ್ತರ ನಿರೀಕ್ಷಿಸುತ್ತಿರುವವರಿಗೆ ಯಾವ ಕಾರಣಕ್ಕೂ ತಡವಾಗಬಾರದೆಂಬ ಕಾಳಜಿ ಅವರಲ್ಲಿ ಸದಾ ಇತ್ತು. ಕಾಗದಗಳನ್ನು ಬರೆದ ಮೇಲೆ ಅವನ್ನು ಟಪಾಲಿಗೆ ಹಾಕಲು ಕೊಲ್ಹಾಪುರದಲ್ಲಿ ಅವರ ಮನೆಯ ಬಡಾವಣೆ ರಾಜಾರಾಮಪುರಿಯಲ್ಲಿ ಪೋಸ್ಟ್ ಬಾಕ್ಸ್ ಸ್ವಲ್ಪದೂರದಲ್ಲಿತ್ತು. ನಡೆದು ಹೋಗುವ ವೇಳೆಗೆ ಎಷ್ಟೋ ಸಲ ಟಪಾಲವನ್ನು ಪೆಟ್ಟಿಗೆಯಿಂದ ತೆಗೆದುಕೊಂಡು ಹೋಗಿಬಿಡುತ್ತಿದ್ದರು. ಹಾಗಾಗಿ ಇವರ ಉತ್ತರ ನಿರೀಕ್ಷಿಸುತ್ತಿದ್ದವರಿಗೆ ಒಂದು ದಿನ ತಡವಾಗುತ್ತಿತ್ತು. ಹೀಗಾಗಿ

ಉಪಾಧ್ಯೆ ಅವರು ಅಂಚೆ ಕಛೇರಿಗೆ ಒಂದು ಮನವಿ ಸಲ್ಲಿಸಿ, ನಮ್ಮ ಮನೆಗೆ ಹತ್ತಿರದಲ್ಲಿ ಎಲ್ಲಾದರೂ ಒಂದು ಅಂಚೆ ಪೆಟ್ಟಿಗೆ ಸ್ಥಾಪಿಸಿ ಎಂದು ಕೇಳಿಕೊಂಡರು. ಅಂಚೆ ಕಛೇರಿಯ ಅಧಿಕಾರಿಗಳು ಉಪಾಧ್ಯೆ ಅವರಿಗೆ ಬಟವಾಡೆಯಾಗುವ ಪತ್ರಗಳ ಸಂಖ್ಯೆಯ ಸಮೀಕ್ಷೆ ಮಾಡಿದಾಗ ಅವರಿಗೆ ಆಶ್ಚರ್ಯವೇ ಕಾದಿತ್ತು. ತುರ್ತಾಗಿ ಕ್ರಮ ಕೈಗೊಂಡ ಅಧಿಕಾರಿಗಳು ಹತ್ತೇ ದಿನಗಳೊಳಗೆ ಡಾ. ಆ.ನೇ. ಉಪಾಧ್ಯೆ ಅವರ ಮನೆಯ ಮುಂದೆಯೇ ಗೇಟಿನ ಪಕ್ಕಕ್ಕೇ ಒಂದು ಅಂಚೆ ಪೆಟ್ಟಿಗೆಯನ್ನು ವಿಶೇಷವಾಗಿ ಸ್ಥಾಪಿಸಿದರು. ಉಪಾಧ್ಯೆ ಅವರ ನಿಧನಾನಂತರವೂ ಕೆಲವು ತಿಂಗಳುಗಳವರೆಗೆ ಅದು ಅಲ್ಲೇ ಇತ್ತು. ನಂತರ ಅದು ಮರೆಯಾದದ್ದು ಸಹಜವೇ ಇದೆ.

vi. ಕೊಲ್ಲಾಪುರದ ರಾಜಾರಾಮಪುರಿ ಬಡಾವಣೆಯ ಆನಂದ್ ಹೌಸಿಂಗ್ ಸೊಸೈಟಿಯ ಎಂಟನೇ ಗಲ್ಲಿಯಲ್ಲಿ ಡಾ. ಆ.ನೇ. ಉಪಾಧ್ಯೆ ಅವರ 'ಧವಲಾ' ಹೆಸರಿನ ಮನೆಯಿತ್ತು. ಆ ಗಲ್ಲಿಯನ್ನು ಮರಾಠಿಯಲ್ಲಿ ಆಠವೀಗಲ್ಲಿ ಎನ್ನುತ್ತಿದ್ದರು. ಉಪಾಧ್ಯೆ ಅವರ ನಿಧನಾನಂತರ ನಗರ ಪಾಲಿಕೆ ಅದನ್ನು 'ಆ.ನೇ. ಉಪಾಧ್ಯೆ ಮಾರ್ಗ' ಎಂದು ನಾಮಕರಣ ಮಾಡಿದರು. ಆ ನಗರದ ಎಷ್ಟೋ ಗಲ್ಲಿಗಳಲ್ಲಿ ಇದೂ ಒಂದು ಗಲ್ಲಿಯಾಗಬಹುದಾಗಿದ್ದುದು, ಆ ದೊಡ್ಡ ವಿದ್ವತ್ ವ್ಯಕ್ತಿತ್ವದ ಮಹಿಮೆಯಿಂದ ಆ.ನೇ. ಉಪಾಧ್ಯೆ ಮಾರ್ಗವಾಯಿತು. ಹೀಗೆ ಉಪಾಧ್ಯೆ ಅವರು ಎಲ್ಲ ದೃಷ್ಟಿಯಿಂದಲೂ ಮಾರ್ಗಪ್ರವರ್ತಕರು.

* * * * *

ಕಾವ್ಯ ಪ್ರತಿಭೆಗಿಂತ ಶಾಸ್ತ್ರ ಪ್ರತಿಭೆ ಕಡಿಮೆಯದಲ್ಲ ಎಂಬ ತಮ್ಮ ಅಭಿಪ್ರಾಯಕ್ಕೆ ಸ್ವತಃ ಉಪಾಧ್ಯೆಯವರೇ ನಿದರ್ಶನ. ೧೯೬೭ರಲ್ಲಿ ಶ್ರವಣಬೆಳಗೊಳದಲ್ಲಿ ನಡೆದ ಅಖಿಲಭಾರತದ ಕನ್ನಡ ಸಾಹಿತ್ಯ

ಸಮ್ಮೇಳನದ ಅಧ್ಯಕ್ಷರಾಗಿ ಅವರು ಆಡಿದ ಮಾತುಗಳು ತರುಣ ಸಂಶೋಧಕರಿಗೆ ಮಾರ್ಗದರ್ಶಕವಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕವಿಗಳ ಸಂಖ್ಯೆಯೇ ವಿಪುಲವಾಗಿದ್ದು; ವಿದ್ವತ್ತಿನ ಬೆಳವಣಿಗೆಯ ಜವಾಬ್ದಾರಿಯನ್ನು ತರುಣರು ವಹಿಸಿಕೊಳ್ಳಬೇಕಾಗಿದೆ ಎಂಬ ಕಾಳಜಿಯುತ ಅಪೇಕ್ಷೆ ಅವರದು. ನಾಡಿನಲ್ಲೆಲ್ಲ ಸುತ್ತಾಡಿ, ತಾಳೋಲೆ ಗ್ರಂಥಗಳನ್ನೂ ಶಾಸನಗಳನ್ನೂ ಶೋಧಿಸುವ ಅಭ್ಯಾಸ, ಅಭಿರುಚಿ, ತಾಳ್ಮೆಗಳು ನಮ್ಮಲ್ಲಿ ಮೈಗೂಡಲಿ ಎಂಬ ಹಿರಿಯಾಸೆ ಅವರದು. ಸಂಶೋಧನೆಗೆ ಬದುಕಿನಲ್ಲಿ ಅವರು ಕೊಟ್ಟ ಸ್ಥಾನವು ಇಂತಿದೆ :

"ಒಂದು ವಿಷಯದ ಮೇಲೆ ಗ್ರಂಥವನ್ನು ರಚಿಸಬೇಕಾದರೆ ಆ ವಿಷಯಕ್ಕೆ ಸಂಬಂಧಿಸಿದ ಸಮಗ್ರ ಸಾಹಿತ್ಯವನ್ನು ವಿವಿಧ ಭಾಷೆಗಳಲ್ಲಿ ಇಂದಿನವರೆಗೆ ಪ್ರಕಟವಾದ ಗ್ರಂಥಗಳೆಲ್ಲವನ್ನೂ ಅವಲೋಕಿಸ ಬೇಕಾಗುತ್ತದೆ. ಆಮೇಲೆ ನಾವು ಕೈಗೊಳ್ಳುವ ಗ್ರಂಥ ರಚನೆಯಿಂದ ಕನ್ನಡಕ್ಕೆ ಏನಾದರೂ ನೀಡಿದಂತಾಗುತ್ತದೆ. ಇಂಥ ವಿದ್ವತ್ತು, ಅಭ್ಯಾಸಗಳು ಗ್ರಂಥ ಲೇಖಕರಿಗೆ ಅವಶ್ಯವಾಗಿ ಬೇಕು. ಅದಕ್ಕಾಗಿ ಸತತಾಭ್ಯಾಸದ ಅವಶ್ಯಕತೆಯಿದೆ. ಇದಕ್ಕೆ ನಾವು ಸಾಹಿತ್ಯ ತಪಸ್ಸೆಂದು ಕರೆಯೋಣ ಬೇಕಾದರೆ. ಇಂಥ ತಪಸ್ಸಿನಿಂದ ಖಚಿತ ರೂಪದ ಜ್ಞಾನವು ವ್ಯಕ್ತಿಯಲ್ಲಿ ಉಂಟಾಗುತ್ತದೆ. ಅದನ್ನೇ ವಿದ್ವತ್ತೆಂದು ಹೇಳಬಹುದು. ಈ ವಿದ್ವತ್ತೂ ರಸಿಕತೆಯೂ ವ್ಯಾವಹಾರಿಕ ಜೀವನಕ್ಕೆ ವಿರೋಧವಲ್ಲ; ಅದಕ್ಕೆ ಪೋಷಕ. ಸಹೃದಯದಲ್ಲಿ ಭಾವ ಬುದ್ಧಿಗಳೆರಡೂ ಸಮತೂಕ ದಲ್ಲಿರಬೇಕು. ಅಂದರೇನೆ ಅದು ಸಂಪೂರ್ಣ ವ್ಯಕ್ತಿತ್ವವೆನಿಸುತ್ತದೆ. ಒಂದಂಗವು ಬೆಳೆದು ಇನ್ನೊಂದಂಗವು ಕುಗ್ಗಿದರೆ ಸಾಹಿತ್ಯ ಜೀವನದಲ್ಲಿ ಅದಷ್ಟು

ಕೊರತೆಯೇ ಎನಿಸುತ್ತದೆ. ಮಾನವನ ಈ ದೃಷ್ಟಿಗಳು ಸೇರಿ ಸಮಗ್ರ ದೃಷ್ಟಿಯನ್ನು ರೂಪಿಸಲಿ."

* * * * *

ಪಾಂಡಿತ್ಯ ಕ್ಷೇತ್ರದಲ್ಲಿ ತೊಡಗಿರುವ ತರುಣ ಪೀಳಿಗೆಯವರ ಬಗೆಗೆ ಉಪಾಧ್ಯೆ ಆಶಾವಾದಿಯಾಗಿದ್ದರು. ಆದರೂ ಒಂದು ವಿಷಯದಲ್ಲಿ ಅವರು ಆತಂಕಿತರಾಗಿದ್ದರು. "..... ಆದ್ರೆ ಒಂದು ಮಾತು ನಿಮಗೆ ಹೇಳಬೇಕೆನ್ನಿಸ್ತದೆ. ಅವರ ಜ್ಞಾನದ ವಿಸ್ತಾರ ಹೆಚ್ಚು. ಆಳ ಕಡಿಮೆ. ಮತ್ತು ದುಡಿಮೆ ಒಂದು ಕಡಿಮೆ ನಾಯಕರೆ. ಸ್ವಲ್ಪ ಕೆಲಸ ಮಾಡಿ ಹೆಚ್ಚು ಲಾಭ ಆಗಬೇಕು- ಇದೊಂದು ವೃತ್ತಿ ಬೆಳೀತ ಹೋಗ್ತಿದೇರಿ......

ಹಿಂದಿನ ವಿದ್ವಾನರಲ್ಲಿ, ಏನೋ ಪರಂಪರೆ ಅನ್ರಿ, ವಿದ್ಯಾ ವಿನಯೇನ ಶೋಭತೇ ಅಂತಿದ್ರು. ಅವರದು ಒಂದಿಷ್ಟು ಸ್ವಲ್ಪ ವಿನಯ ಇರ್ತಿತ್ತರಿ. ಆದ್ರೆ ಈಗಿನ ತರುಣರಲ್ಲಿ ಈ ಗುಣದ್ದೊಂದು ಅಭಾವ ಕಾಣಿಸ್ತದೆ. ಯಾಕಂದ್ರೆ ನಾವು ತಿಳೀಬೇಕ್ರೀ. ಈವನ್ ದಿ ಟಾಲೆಸ್ಟ್ ಟ್ರೀಸ್ ಡು ನಾಟ್ ರೀಚ್ ಹೆವೆನ್. ನಮಕಿಂತಲೂ ಜಗತ್ತಿನಲ್ಲಿ ಹೆಚ್ಚು ವಿದ್ವಾನರಿದಾರೆಂಬುದನ್ನು ಮರೀಕೂಡದ್ರಿ. ಇವು ಮೂರು ದೃಷ್ಟಿಯಿಂದ ನೋಡಿದ್ರೆ ಅವರಿಂದ ನನಗೇನೂ ನಿರಾಶೆಯಿಲ್ಲ." (೩೦-೯-೧೯೭೫ ರಂದು ಮೈಸೂರು ಆಕಾಶವಾಣಿಗಾಗಿ - ಡಾ. ಹಾ.ಮಾ. ನಾಯಕರಿಗೆ ನೀಡಿದ ಸಂದರ್ಶನ)

* * * * *

ಉಪಾಧ್ಯೆಯವರ ಮರಣವಾರ್ತೆಯನ್ನು ಕೇಳಿದ ಕೂಡಲೇ ವಿದ್ವಾಂಸರಾದ ಡಾ. ಆರ್.ಎಸ್. ದಾಂಡೇಕರರು ಹೀಗೆ ಉದ್ಗರಿಸಿದರು: "Alas! Prakritology now disconsolutely orphanised?"

ಅಕ್ಟೋಬರ್ ೧೪, ೧೯೭೫ ರಂದು ಬೆಂಗಳೂರಿನ ಗಾಂಧೀ ಸಾಹಿತ್ಯ ಸಂಘದಲ್ಲಿ ಉಪಾಧ್ಯೆಯವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತ, ಜಿ.ಪಿ. ರಾಜರತ್ನಂ ಆಡಿದ ಮಾತುಗಳಿವು :

"ಆ.ನೇ. ಉಪಾಧ್ಯೆ ಅವರು ಕ್ರಿಸ್ತಪೂರ್ವದ ಆಳಕ್ಕೆ ಬೇರಿಳಿದ ಮರ. ಹಾಗೆಯೇ ಹಣ್ಣು ತುಂಬಿ ನಿಂತ ಮರ. ಆದರೆ ಆ ಹಣ್ಣುಗಳ ಲಾಭ ನಮಗಿಂತ ಹೆಚ್ಚಾಗಿ ಉತ್ತರ ಭಾರತ, ಜರ್ಮನಿ, ಫ್ರಾನ್ಸ್‌ನವರಿಗಾಯಿತು. ಏಕೆಂದರೆ ಅವರ ಕ್ಷೇತ್ರ ನಮ್ಮಲ್ಲಿ ಅನೇಕರಿಗೆ ಪರಿಚಯವಿಲ್ಲದ, ಭಯ ಹುಟ್ಟಿಸುವ ಕ್ಷೇತ್ರ. ಅವರು ಆಯ್ದ ಕ್ಷೇತ್ರ ಸಂಸ್ಕೃತಕ್ಕಿಂತಲೂ ಪ್ರಾಚೀನವೆಂದು ಹೇಳುವ ಪ್ರಾಕೃತ. ಅದರಲ್ಲಿನ ಅರ್ಧಮಾಗಧಿ, ಅಪಭ್ರಂಶ. ಉಪಾಧ್ಯೆ ಅವರು ಕನ್ನಡಿಗ. ಭಾರತದರ್ಶನಕ್ಕೆ ಸಂಬಂಧಿಸಿದ್ದನ್ನು ತಮ್ಮ ಭಾಷೆಯ ಕೃಷಿಯನ್ನಾಗಿ ಮಾಡಿಕೊಂಡು ಅವರು ಅಸಾಧ್ಯ ಕೆಲಸ ಮಾಡಿದರು. ದಕ್ಷಿಣ ಭಾರತದಲ್ಲಿ ಅವರನ್ನು ಬಿಟ್ಟರೆ ಬೇರೆ ಯಾರೂ ಏನೂ ಮಾಡಿಲ್ಲ."

* * * * *

ಕನ್ನಡ ಹಾಗೂ ಭಾರತೀಯ ಸಾಹಿತ್ಯ ಕ್ಷೇತ್ರಕ್ಕೆ ಅವರಿಂದ ಸಂದ ಸೇವೆಗೆ ದೊರೆತ ಮನ್ನಣೆಗಳು ಹಲವಾರು. ವಿದ್ವತ್ ಜಗತ್ತಿನ ಅತ್ಯಂತ ಪ್ರತಿಷ್ಠಿತ ಪುರಸ್ಕಾರಗಳೂ ಸ್ಥಾನಮಾನಗಳೂ ಅವರಿಗೆ ಸಂದಿವೆ. ಕೊಲ್ಹಾಪುರದಿಂದ ಅವರು ನಿವೃತ್ತಿಯಾದ ನಂತರ ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ಅಧ್ಯಯನ ಪೀಠದ ಸಂಸ್ಥಾಪಕ ಪ್ರಾಧ್ಯಾಪಕರಾಗಿ ಕಾರ್ಯಭಾರ ನಿರ್ವಹಿಸಿದರು. ಅವರ ಮಾರ್ಗದರ್ಶನ, ಸ್ನೇಹಲಾಭ ದೊರೆತ ವಿದ್ವಾಂಸರಿಂದ ಕರ್ನಾಟಕದ ವಿದ್ವತ್ ಪರಂಪರೆ ಸಮೃದ್ಧಗೊಂಡಿತು. ಸಮ್ಯಕ್‌ದರ್ಶನ,

ಜ್ಞಾನಗಳೊಂದಿಗೆ ಚಾರಿತ್ರವನ್ನೂ ಜೊತೆಗೂಡಿಸಿಕೊಂಡು ಬಾಳಿದ ಜೀವ ಅವರದು. ತಮ್ಮ ಕೃತಿಯ ಪ್ರಸ್ತಾವನಾ ಲೇಖನದ ಕೊನೆಯಲ್ಲಿ ಅವರು ತಪ್ಪದೇ 'ಕರ್ಮಣ್ಯೇವಾಧಿಕಾರಸ್ತೇ' ಎಂಬ ವಾಕ್ಯವನ್ನು ಹಾಕುತ್ತಿದ್ದರು. ಭಾಗವತ ಶ್ರದ್ಧೆಯ ಹಿನ್ನೆಲೆಯನ್ನು ಬಳಸಿಕೊಳ್ಳದೆ- 'ಕರ್ಮದಲ್ಲಿ ಮಾತ್ರ ನಿನಗೆ ಅಧಿಕಾರವುಂಟು', ಅದರ ಲಾಭ ನಷ್ಟಗಳ ಉತ್ತರದಾಯಿತ್ವ ತಮ್ಮದೇ ಎಂಬ ಅಸ್ತಿತ್ವವಾದಿ ಚಿಂತನೆಯನ್ನು ಅವರು ಹೊಂದಿದ್ದರು. ಈ ಕಾರಣಕ್ಕಾಗಿ ನಡೆ-ನುಡಿ ಒಂದಾದ ಆದರ್ಶ ಬದುಕು ಅವರದಾಯ್ತು. ಸಂಶೋಧನೆ ಅವರಲ್ಲಿನ ಮಾನವೀಯ ಸ್ಪಂದನಗಳನ್ನು ಬತ್ತಿಸಲಿಲ್ಲ. ಶ್ವೇತಾಂಬರ ಸಂಪ್ರದಾಯದ ಮಹಾವೀರನ ಕಥೆಯ ಪ್ರಸಂಗವೊಂದು ಹೀಗಿದೆ: ತಾಯ ಗರ್ಭದಲ್ಲಿದ್ದ ಮಹಾವೀರ ತಾತ್ಕಾಲಿಕವಾಗಿ ಚಲನೆಯನ್ನು ನಿಲ್ಲಿಸಿದಾಗ, ತಲ್ಲಣಕ್ಕೊಳಗಾದ ತಾಯಿ ತೀವ್ರವಾದ ವೇದನೆಗಳಿಗೊಳಗಾದಳಂತೆ. ಮಹಾವೀರನಿಗೆ ಇದು ತಿಳಿದು, ಮುಂದೆ ತಾನು ತಾಯಿಯ ಪೂರ್ಣ ಸಮ್ಮತಿ ಪಡೆದೇ ಸನ್ಯಾಸ ದೀಕ್ಷೆ ಪಡೆದುಕೊಳ್ಳುವೆನೆಂಬ ನಿರ್ಧಾರ ಮಾಡಿದನಂತೆ. ಉಪಾಧ್ಯೆಯವರ ಮಾತೃಭಕ್ತಿ ಕೂಡ ಇಂದಿನ ವ್ಯಾವಹಾರಿಕ ಯುಗದಲ್ಲಿ ಅಪರೂಪ. ತಾಯಿಯ ಹತ್ತಿರವೇ ಉಳಿವ ನಿರ್ಧಾರದಿಂದಾಗಿ ಅವರು ದೂರ ಪ್ರದೇಶದ ಪ್ರತಿಷ್ಠಿತ ಅಧಿಕಾರ ಸ್ಥಾನಗಳನ್ನು ಕೂಡ ನಿರಾಕರಿಸಿದರು. ಪಾಂಡಿತ್ಯದಿಂದಾಗಿ ಅವರ ಹೃದಯ ರಸ ಬತ್ತಿ ಹೋಗಿ ಬರಡಾಗಿರಲಿಲ್ಲ. ಹಾಮಾನಾ ಅವರ ಪುಟ್ಟ ಮಗಳ ಪಾದದ ಅಳತೆಯನ್ನು ಕಾಗದದಲ್ಲಿ ತಾವೇ ಗುರುತು ಮಾಡಿಕೊಂಡು ಕೊಲ್ಲಾಪುರದಿಂದ ಬರುವಾಗ ಪಾದರಕ್ಷೆ ಹೊಲಿಸಿಕೊಂಡು ಬಂದಂಥ ವಾತ್ಸಲ್ಯಮಯಿ ಚೇತನ ಅವರದು.

* * * * *

ಉಪಾಧ್ಯೆಯವರೇ ಒಂದು ತೀರ್ಥವಿದ್ದಂತೆ. ಅವರ ಬಗೆಗೆ ಆಲೋಚಿಸುವುದು, ಮಾತನಾಡುವುದೆಂದರೇ ತೀರ್ಥದಲ್ಲಿ ಮಿಂದು ಮಡಿಯಾದಂತೆ.

* * * * *

## ಡಾ. ಆ.ನೇ. ಉಪಾಧ್ಯೆ ಅವರ ಕೃತಿಗಳು

1. *Pancasuttam* of an Unknown Ancient Writer, Pub. From Kolhapur, 1934.
2. *Pravacanasara* of Kundakunda, Pub. By Raychandra Jaina Shastramala, Bombay, 1935.
3. *Paramatma - Prakasa* of Yogindudeva, Pub. By Manikchandra Digambara Jaina Granthamala, Bombay, 1937.
4. *Varangacarita* of Jatasimhanandi, Pub. By Manikchandra Digambara Jaina Granthamala, Bombay, 1938.
5. *Kamsavaho* of Ramapanivada, Pub. By Hindi Grantha Ratnakara Karyalaya, Bombay, 1940.
6. *Usaniruddham* (attributed to Ramapanivada), Pub. in the Journal of the University of Bombay, Vol. X, Part 2, Sept, 1941, Bombay 1941.

7. *Tiloyapannatti* of Jadivasaha, Pub. From Sholapur, 1943 & Part, 2, 1951.
8. *Brihart - Kathakosa* of Harisena (931-32), Pub. By Singhi Jaina Series, Bharatiya Vidya Bhavana, Bombay 1943.
9. *The Dhurtakhyana : A critical study*, Pub. From Bharatiya Vidya Bhavana, Bombay 1944.
10. *Chandralekha* of Rudradasa, Pub. By Bharatiya Vidya Bhavana, Bombay 1945.
11. *Lilavati* of Kutuhala (C.800 AD), Pub. By Singhi Jain Series, Bombay 1949.
12. *Ananda Sundari* of Ghanashyama, Pub, by MLBD, Varanasi 1955.
13. *Kattigeyanuppekkha* of Svamikumara, Pub. From Agas 1960.
14. *Kuvalayamala* of Udyotana, Pub. From Bombay 1959.
15. *Jambudivapannatti* of Paumanandi, Pub. From Sholapur 1958.
16. *Jnanapitha Pujahjali*, Pub. From Banaras 1960.
17. *Atmanushasana* of Gunabhadra, Pub. From Sholapur 1961.

18. *Kuvalayamala* - katha - Samksepa of Ratnaprabhasuri, Pub. From Bombay 1961.

19. *Pancavimsati* of Padmanandi, Pub. From Sholapur 1962.

20. *Punyasrava Kathakosa* of Ramachandra Mumuksu, Pub. From Sholapur 1964.

21. *Sanmati Sutra and Siddhasena*, Pub. From Delhi, 1965.

22. *Aradhana Samuccayam and Yogasara - Sangrahasca,* Pub. Banaras, 1972.

23. *Saptasatisara*, Shivaji University Pub. From Kolpur, 1970.

24. *Selections in Pali*, Pub. By University of Bombay, 1970.

25. *Siddhasena Divakara's Nyayavatara*, Pub. From Bombay 1971.

26. *Gitavitaraga Prabandhah* of Panditacarya, Pub. From Banaras, 1972.

27. *Dharma - Ratnakara* of Jayasenacarya, Pub. From Sholapur, 1974.

28. *Kathakosa* of Prabhachandra, Bharatiya Jnanapith, Pub. in 1974.

•

29. *Mahavira,* Bharatiya Jnanapitha, Pub. in 1974.

30. *Pancastikayasara,* Bharatiya Jnanapith, Pub. From Banaras, 1975.

31. *Prakrit Languages and Literature*, Pub. by University of Poona, 1975.

32. *Jnanarnava of Shubhachandra*, Pub. From Sholapur, 1976.

33. *Pali Mattu Prakrita* in Kannada, Pub. by Mysore University, 1965.

34. *Jainism* (in Collaboration with Dr. C.Caillat and B.Patil), Macmillan & Co., New Delhi, 1974.

* * * * *

## ಕನ್ನಡದಲ್ಲಿ ಡಾ. ಆ.ನೇ. ಉಪಾಧ್ಯೆಯವರ ಸಾಹಿತ್ಯ

ಉಪಾಧ್ಯೆಯವರ ಕನ್ನಡ ಬರವಣಿಗೆ ಪ್ರಾರಂಭವಾದದ್ದು, ಅವರು ಎಂ.ಎ., ವಿದ್ಯಾರ್ಥಿಯಾಗಿದ್ದಾಗ. ದಕ್ಷಿಣ ಭಾರತ ಜೈನ ಸಭೆಯ ವತಿಯಿಂದ ಪ್ರಕಟವಾಗುತ್ತಿದ್ದ 'ಜಿನವಿಜಯ' ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿ ಒಬ್ಬರಾಗಿದ್ದ ಅವರು ನಿಯತವಾಗಿ ಕನ್ನಡ ಲೇಖನಗಳನ್ನು ಬರೆದರು. ಅರ್ಹತ್ಪೂಜೆ, ವೃಷಭದೇವ, ಪ್ರಭೆ, ದೇವಪೂಜೆ, ಕುಂದಕುಂದಾಚಾರ್ಯ, ತುಂಬಲೂರಾಚಾರ್ಯ ಮತ್ತು ಸಮಂತಭದ್ರಾಚಾರ್ಯ, ಕೆಲವು ಪ್ರಾಸಂಗಿಕ ವಿಚಾರಗಳು ಮತ್ತು ನಿಸರ್ಗದೇವತೆ- ಇವೇ ಮೊದಲಾದವು ಅವರ ಪ್ರಾರಂಭಿಕ ಕನ್ನಡ ಲೇಖನಗಳು.

ಶ್ರೀ ಮೋಹನ್‌ಲಾಲ್ ದಲಿತಚಂದ್ ದೇಸಾಯಿ ಅವರ 'ದೇವರು ಮತ್ತು ಪೂಜೆ' ಎಂಬ ವಿಚಾರ ಪ್ರಚೋದಕ ಗುಜರಾತಿ ಲೇಖನವನ್ನಾಧರಿಸಿ ಉಪಾಧ್ಯೆಯವರು 'ದೇವಪೂಜೆ' ಎಂಬ ಲೇಖನವನ್ನು ಬರೆದರು. 'ಕೆಲವು ಪ್ರಾಸಂಗಿಕ ವಿಚಾರಗಳು' ಎಂಬ ಲೇಖನದಲ್ಲಿ ಜೈನ ಧಾರ್ಮಿಕ ಗ್ರಂಥಗಳ ಸಂಪಾದನೆ, ವಿಮರ್ಶೆ, ಸಂಶೋಧನೆ, ಅಧ್ಯಯನ ಮತ್ತು ಪ್ರಕಾಶನವನ್ನು ಕುರಿತಂತೆ ಚರ್ಚಿಸಿದ್ದಾರೆ. ಈ ವಿಚಾರವಾಗಿ ಕನ್ನಡ ಜೈನರು ತೋರುವ ನಿರ್ಲಕ್ಷ್ಯವನ್ನು ಖಂಡಿಸಿ, "ಕನ್ನಡ ಜೈನರು ತೋರುವ ನಿರ್ಲಕ್ಷ್ಯವನ್ನು ನೋಡಿ ನಿಜಕ್ಕೂ ನನಗೆ ನಾಚಿಕೆಯಾಗುತ್ತದೆ. ನಮ್ಮ ಶ್ರೀಮಂತ ಸಾಹಿತ್ಯವನ್ನು ವೈಭವೀಕರಿಸುವುದರಲ್ಲಿ ಇವರನ್ನು ಮೀರಿಸುವವರು ಯಾರೂ ಇಲ್ಲ. ಆ ಶ್ರೀಮಂತ ಸಾಹಿತ್ಯವನ್ನು ಪ್ರಕಟಿಸುವ ಬಗ್ಗೆ ನಾವು ಯೋಚಿಸಿಯೇ ಇಲ್ಲ. ಇದು ಎಲ್ಲ ಜೈನರು ಮಾಡಬೇಕಾದ

ಕರ್ತವ್ಯವಲ್ಲವೇ ?" ಎಂದು ಪ್ರಶ್ನಿಸಿದ್ದಾರೆ. ಕಾಮತಾಪ್ರಸಾದ ಜೈನ್ ಅವರು ಬರೆದ 'ಭಗವಾನ್ ಮಹಾವೀರ' ಲೇಖನದಿಂದ ಪ್ರೇರಿತರಾಗಿ 'ವೃಷಭದೇವ' ಎಂಬ ಲೇಖನವನ್ನು ಪ್ರಕಟಿಸಿದರು. ಜೈನಧರ್ಮವು ಮಹಾವೀರನಿಂದ ಸ್ಥಾಪಿತವಾಗಿದ್ದು, ಅದಕ್ಕಿಂತ ಹಿಂದಿನ ಚರಿತ್ರೆ ಇಲ್ಲವೆಂಬ ಅಪಕಲ್ಪನೆಯನ್ನು ದೂರ ಮಾಡುವ ಸಲುವಾಗಿ ಈ ಲೇಖನವನ್ನು ಉಪಾಧ್ಯೆ ಬರೆದರು.

ಶ್ರೀಮತಿ ಪೂರ್ಣ ಶಶಿದೇವಿ ಅವರ 'ಗಲ್ಪ ಪುಷ್ಪಾಂಜಲಿ' ಎಂಬ ಬಂಗಾಳಿ ಲೇಖನದ ಕನ್ನಡ ರೂಪವೇ 'ಪ್ರಭೆ' ಎಂಬ ಅವರ ಪ್ರಬಂಧ.

ಕಲ್ಯಾಣಕೀರ್ತಿ ವಿರಚಿತ '*ಚಿನ್ಮ ಯ ಚಿಂತಾಮಣಿ*' ಎಂಬ ಕನ್ನಡ ಕಾವ್ಯವನ್ನು ಪ್ರೊ.ಕೆ.ಜಿ. ಕುಂದಣಗಾರರ ಸಹಸಂಪಾದಕತ್ವದಲ್ಲಿ ಉಪಾಧ್ಯೆಯವರು ೧೯೩೦ರಲ್ಲಿ ಶ್ರೀ ಜಿನವಿಜಯ ಪತ್ರಿಕೆಯಲ್ಲಿ ಪ್ರಕಟಿಸಿದರು. ಸ್ವತಂತ್ರ ಪುಸ್ತಕವಾಗಿ ಮುಂದೆ ಈ ಕೃತಿ ಪ್ರಕಟವಾಯಿತು. ಪ್ರೊ. ಕೆ.ಜಿ. ಕುಂದಣಗಾರರ ಜೊತೆಯಲ್ಲಿಯೇ ಸಂಪಾದಿಸಿ, ೧೯೩೯ರಲ್ಲಿ ಉಪಾಧ್ಯೆಯವರು ಹೊರತಂದ ಮತ್ತೊಂದು ಕಾವ್ಯ - '*ಜ್ಞಾನ ಭಾಸ್ಕರ ಚರಿತೆ*'.

೧೯೭೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ವತಿಯಿಂದ ನೀಡಿದ ಉಪನ್ಯಾಸಗಳು '*ಪಾಲಿ ಮತ್ತು ಪ್ರಾಕೃತ*' ಎಂಬ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

ಜಟಾಸಿಂಹನಂದಿಯ '*ವರಾಂಗಚರಿತೆ*'ಯನ್ನು ಕುರಿತ ಉಪಾಧ್ಯೆಯವರ ಇಂಗ್ಲಿಷ್ ಲೇಖನವು ಪ್ರೊ.ಡಿ.ಎಲ್. ಎನ್. ಅವರಿಂದ ಸಂಗ್ರಹಾನುವಾದವಾಗಿ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿದೆ. '*ವಡ್ಡಾರಾಧನೆ ಎಂಬ ಹಳಗನ್ನಡ ಗದ್ಯಗ್ರಂಥ*' ಎಂಬ

ಲೇಖನವನ್ನು ಸಾರಾನುವಾದ ಮಾಡಿ ಡಿ.ಎಲ್.ಎನ್. ಅವರು ಪ್ರಬುದ್ಧ ಕರ್ನಾಟಕದಲ್ಲಿ ಪ್ರಕಟಿಸಿದ್ದಾರೆ.

*ಉಪಾಧ್ಯೆಯವರ ಇನ್ನಿತರ ಕನ್ನಡ ಲೇಖನಗಳ ಪಟ್ಟಿ ಇಂತಿದೆ :*

೧) *ಧರ್ಮಪರೀಕ್ಷೆ ಮತ್ತು ಧೂರ್ತಾಖ್ಯಾನ*- ಪ್ರಬುದ್ಧ ಕರ್ನಾಟಕ, ನಂ.೨೬, ಸಂ-೧೪, ೧೯೪೫

೨) *ಕವಿ ಪರಮೇಶ್ವರ ಅಥವಾ ಕವಿ ಪರಮೇಷ್ಠಿ*-ಪ್ರಬುದ್ಧ ಕರ್ನಾಟಕ, ಸಂ-೨೮, ಸಂ-೩, ೧೯೪೭.

೩) *ಪ್ರಾಕೃತ ಭಾಷೆಯಲ್ಲಿ ಜೈನಸಾಹಿತ್ಯ* - ಸರ್ವಧರ್ಮ ಸಮ್ಮೇಳನ ರಜತ ಮಹೋತ್ಸವ ವಿಶೇಷಾಂಕ, ಧರ್ಮಸ್ಥಳ, ೧೯೫೭.

೪) *ಚಾವುಂಡರಾಯ ಮತ್ತು ಅವನ ಹಿಂದಿನ ಕೃತಿಕರ್ತರು* (ಅನು. ಎಸ್.ಶಿವಣ್ಣ) - ಪ್ರಬುದ್ಧ ಕರ್ನಾಟಕ, ೧೯೬೬.

೫) *ರನ್ನ ಕವಿಯ ಕಾಲ ದೇಶ ವ್ಯಕ್ತಿತ್ವ* - 'ರನ್ನ ಕವಿ' ಪ್ರಸಾರಾಂಗ.

೬) *ಪ್ರಾಕೃತ* (ಅನು. ಎಲ್.ಗುಂಡಪ್ಪ) - ಕರ್ನಾಟಕ ಪರಂಪರೆ, ಸಂ.೧.

೭) *ಕನ್ನಡ ಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಯ ಇತಿಹಾಸದಲ್ಲಿ ಜೈನ ಆಚಾರ್ಯ ಮತ್ತು ಕವಿಗಳ ಸ್ಥಾನ : ಗುರುದೇವ ಮಾಸ* ಪತ್ರಿಕೆ, ಸಂ.೧೩, ಸಂ.೯, ಮಂಗಳೂರು.

೮) *ಕನ್ನಡ ಕವಿ ಚಕ್ರವರ್ತಿ ರನ್ನನ ಅಮರ ಸಾಹಿತ್ಯ ಸೇನೆ :* ಸನ್ಮತಿ ಮಾಸಪತ್ರಿಕೆ, ಅಕ್ಟೋಬರ್ ೧೯೬೫, ಬಾಹುಬಲಿ (ಮಹಾರಾಷ್ಟ್ರ).

೯) *ಸಹೃದಯ ಸಂಶೋಧಕ ಮಿತ್ರರು* - ಕನ್ನಡ ನುಡಿ, ೧೬-೮-೧೯೭೧, ಕ.ಸಾ.ಪ., ಬೆಂಗಳೂರು, ೧೯೭೧.

೧೦) ಆದಿಪುರಾಣದ ಎರಡು ಪದ್ಯಗಳ ಅರ್ಥದ ಔಚಿತ್ಯ : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೫೮, ಸಂ.೧, ಬೆಂಗಳೂರು.

೧೧) ಆದಿಪುರಾಣದ ಎರಡು ಶ್ಲೋಕಗಳ ಅರ್ಥ- ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೫೬, ಸಂ.೨, ಬೆಂಗಳೂರು.

೧೨) ಮಹಾವೀರ - 'ದಿವ್ಯಧ್ವನಿ' (ಸ್ಮರಣ ಸಂಚಿಕೆ) ೧೯೭೪, ಬೆಂಗಳೂರು.

೧೩) ವಾಸೀಚಂದನ ಕಲ್ಪ - 'ಉಪಾಯನ' (ಡಿ.ಎಲ್.ಎನ್. ಸಂಭಾವನ ಗ್ರಂಥ) ೧೯೬೭, ಮೈಸೂರು.

೧೪) ೪೬ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ - 'ಅಧ್ಯಕ್ಷರ ಭಾಷಣಗಳು', ಸಂ.೩, ಕ.ಸಾ.ಪ., ೧೯೬೭, ಬೆಂಗಳೂರು.

೧೫) ಪದ್ಮನಂದಿ ಮತ್ತು ಅವನ ಕೃತಿಗಳು- ಪ್ರಬುದ್ಧ ಕರ್ನಾಟಕ, ಸಂ.೫೩, ಸಂ.೩, ೧೯೭೧.

೧೬) ವಡ್ಡಾರಾಧನೆ ಹಿನ್ನಲೆ : 'ವಡ್ಡಾರಾಧನೆ', ಐ.ಬಿ.ಎಚ್. ಪ್ರಕಾಶನ, ಕವಿಕಾವ್ಯ ಮಾಲೆ, ೧೯೭೭, ಬೆಂಗಳೂರು.

೧೭) ಭಾರತೀಯ ಭಾಷಾ ಸಾಹಿತ್ಯ ಸ್ಥಿತಿಗತಿಗಳು - ಪ್ರಾಕೃತ ಅಪಭ್ರಂಶ - ಕ.ಅ.ಸಂ. ಕ.ಸಾ.ಚ., ಸಂ.೨, ಮೈ.ವಿ.ವಿ. ಮೈಸೂರು, ೧೯೭೬.

೧೮) ವಡ್ಡಾರಾಧನೆ- ಹಿನ್ನೆಲೆ, ಗ್ರಂಥನಾ, ಕತೃತ್ವ, ಕಾಲ- ಕ.ಅ.ಸಂ. ಕ.ಸಾ.ಚ., ಮೈ.ವಿ.ವಿ., ಮೈಸೂರು. ೧೯೭೬.

೧೯) ಪ್ರಾಕೃತ ಭಾಷೆಗಳು ಮತ್ತು ಸಾಹಿತ್ಯ - ಕನ್ನಡ ವಿಶ್ವಕೋಶ, ಸಂ.೧೧, ಮೈ.ವಿ.ವಿ., ಮೈಸೂರು, ೧೯೮೩.

೨೦) *ಯಾಪನೀಯ ಸಂಘದ ಮೇಲೆ ವಿಶೇಷ ಬೆಳಕು* (ಅನು. ಸೀತಾರಾಮ ಜಾಗೀರದಾರ), ಮಾನವಿಕ ಕರ್ನಾಟಕ ಸಂ.೪, ಸಂ.೩, ೧೯೭೪.

೨೧) *ಜೀವಸಂಬೋಧನೆಯಲ್ಲಿ ಅನುಪ್ರೇಕ್ಷೆ ಮತ್ತು ವರಾಂಗನ ಜೀವನ ಚರಿತ್ರೆ - ಶ್ರೀಕಂಠತೀರ್ಥ, ೧೯೭೬.*

೨೨) *ಅಜಿತಸೇನಾಚಾರ್ಯ, ಕವಿಪರಮೇಷ್ಠಿ, ಕೇಶವವರ್ಣಿ, ಭದ್ರಬಾಹು, ಮಾಘನಂದಿ, ಸಮಂತಭದ್ರ, ಹಸ್ತಿಮಲ್ಲ* (ಲೇಖನಗಳು)- *ಕರ್ನಾಟಕ ವಿಷಯ ವಿಶ್ವಕೋಶ,* ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ೧೯೭೯, ಮೈಸೂರು.

೨೩) *ನಯವಾದ* - ಕನ್ನಡ ವಿಶ್ವಕೋಶ, ಸಂ.೧೦, ಕ.ಅ.ಸಂ., ಮೈ.ವಿ.ವಿ., ಮೈಸೂರು, ೧೯೮೦.

೨೪) *ಜಿನಸೇನ-೧, ಜೀನಸೇನ-೨ - ಕನ್ನಡ ವಿಶ್ವಕೋಶ,* ಸಂ.೮.

೨೫) *ಧರ್ಮದ್ರವ್ಯ* - ಕನ್ನಡ ವಿಶ್ವಕೋಶ, ಸಂ.೯.

೨೬) *ಮಾಗಧೀ, ಮಹಾರಾಷ್ಟ್ರೀ, ಮೇರುತುಂಗ* (ಲೇಖನಗಳು), *ಕನ್ನಡ ವಿಶ್ವಕೋಶ,* ಸಂ.೧೩, ೧೯೯೪.

೨೭) *ಸಮಂತಭದ್ರ,* ಕನ್ನಡ ವಿಶ್ವಕೋಶ, ಸಂ.೧೪.

೨೮) *ಪುರುಷ ವ್ರತದ ನಿಶ್ಚಿತ ಅರ್ಥ - ಕನ್ನಡ ಸಾಹಿತ್ಯ ಪರಿಷ್‌ತ್ಪತ್ರಿಕೆ,* ಬೆಂಗಳೂರು, ೧೯೭೪.

೨೯) *ಪುಷ್ಪದಂತ - ಜೀವನ,* ಬೆಂಗಳೂರು, ಏಪ್ರಿಲ್ ೧೯೭೧.

೩೦) *ಡಿ.ಎಲ್. ನರಸಿಂಹಾಚಾರ್-ಒಂದು ಟಿಪ್ಪಣಿ - ಜೀವನ,* ಬೆಂಗಳೂರು, ೧೯೭೧.

## *ಡಾ. ಆ.ನೇ. ಉಪಾಧ್ಯೆ ಅವರ ಜೀವನದ ಪ್ರಮುಖ ಘಟನೆಗಳು*

| | | |
|---|---|---|
| ೬ ಫೆಬ್ರವರಿ ೧೯೦೬ | : | ಜನನ : ಊರು-ಸದಲಗಾ, ಬೆಳಗಾಂ ಜಿಲ್ಲೆ<br>ತಂದೆ : ನೇಮಿನಾಥ ಉಪಾಧ್ಯೆ<br>ತಾಯಿ : ಚಂದ್ರಾಬಾಯಿ. |
| ೧೯೨೩ | : | ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆ |
| ೧೯೨೮ | : | ಬಿ.ಎ. ಪದವೀಧರ |
| ೧೯೨೯ | : | "ಸಮಂತಭದ್ರ, ಆ್ಯನ್ ಔಟ್ ಸ್ಟ್ಯಾಂಡಿಂಗ್ ಪರ್ಸನಾಲಿಟಿ" ಪ್ರಥಮ ಲೇಖನ ಪ್ರಕಟ. |
| ೧೯೩೦ | : | ಎಂ.ಎ. ಪದವೀಧರ<br>ಕೊಲ್ಹಾಪುರ ರಾಜರಾಮ ಕಾಲೇಜಿನಲ್ಲಿ ಅರ್ಧಮಾಗಧಿ ಉಪನ್ಯಾಸಕ. |
| ೧೯೩೩ | : | ಪ್ರಾಧ್ಯಾಪಕ ಹುದ್ದೆಗೆ ಬಡ್ತಿ |
| ೧೯೩೪ | : | '*ಪಂಚಸುತ್ತಂ*' ಪ್ರಥಮ ಪುಸ್ತಕ ಪ್ರಕಟಣೆ |
| ೧೯೩೯-೧೯೪೨ | : | ಮುಂಬಯಿ ವಿಶ್ವವಿದ್ಯಾನಿಲಯದ ಸ್ಪ್ರಿಂಜರ್ ಸ್ಕಾಲರ್‌ಶಿಪ್ |
| ೧೯೪೧ | : | ಹೈದರಾಬಾದಿನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಳನದ |

ಪ್ರಾಕೃತ, ಪಾಲಿ, ಬೌದ್ಧಧರ್ಮ ಮತ್ತು ಜೈನಧರ್ಮ ವಿಭಾಗದ ಅಧ್ಯಕ್ಷತೆ.

೧೯೪೪ : '*ಸ್ವರೂಪ ಸಂಬೋಧನ ಪಂಚವಿಂಶತಿ*' ಮೊದಲ ಸ್ವತಂತ್ರ ಕನ್ನಡ ಗ್ರಂಥ ಪ್ರಕಟಣೆ.

೧೯೬೨ : ಕೊಲ್ಹಾಪುರದ ಕಾಲೇಜಿನ ವೃತ್ತಿಯಿಂದ ನಿವೃತ್ತಿ.

೧೯೬೨-೧೯೭೧ : ನಿವೃತ್ತ ಪ್ರಾಧ್ಯಾಪಕರಿಗೆ ನೀಡುವ ಯುಜಿಸಿ, ಫೆಲೋಷಿಪ್

೧೯೬೨-೧೯೭೨ : ಶಿವಾಜಿ ವಿಶ್ವವಿದ್ಯಾಲಯದ ಕಲಾ ನಿಕಾಯದ ಡೀನ್

೧೯೬೨ : "*ಸಿದ್ಧಾಂತಾಚಾರ್ಯ*" ಬಿರುದು ಬಿಹಾರದ ರಾಜ್ಯಪಾಲರಿಂದ

೧೯೬೫ : *ಪಾಲೀ ಮತ್ತು ಪ್ರಾಕೃತ* (ಕನ್ನಡ ಗ್ರಂಥ ಪ್ರಕಟಣೆ)

೧೯೬೬ : ಅಲಿಘರ್‌ನಲ್ಲಿ ನಡೆದ ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಳನದ ಪ್ರಧಾನ ಅಧ್ಯಕ್ಷತೆ

೧೯೬೭ : ಶ್ರವಣಬೆಳಗೊಳದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ

೧೯೬೮ : ಮಾತೃ ವಿಯೋಗ

೧೯೭೧-೧೯೭೫ : ಮೈಸೂರು ವಿಶ್ವವಿದ್ಯಾನಿಲಯದ ಜೈನಶಾಸ್ತ್ರ ಮತ್ತು ಪ್ರಾಕೃತ ವಿಭಾಗದ ಪ್ರಥಮ ಪ್ರಾಧ್ಯಾಪಕರು.

೧೯೭೧ : ಆಸ್ಟ್ರೇಲಿಯ ಕ್ಯಾನ್‌ಬೆರಾದಲ್ಲಿ ನಡೆದ ೨೮ನೇ ಅಂತರರಾಷ್ಟ್ರೀಯ ಪ್ರಾಚ್ಯ ವಿದ್ಯಾಪರಿಷತ್ತಿನಲ್ಲಿ ಭಾರತ ಸರ್ಕಾರದ ಪ್ರತಿನಿಧಿ.

೧೯೭೨ : ಬೆಳಗಾಂನಲ್ಲಿ ನಡೆದ ದಕ್ಷಿಣ ಭಾರತ ಜೈನ ಮಹಾಸಭೆಯ ೬೨ನೇ ಅಧಿವೇಶನದ ಅಧ್ಯಕ್ಷತೆ.

೧೯೭೩ : ಪ್ಯಾರಿಸ್‌ನಲ್ಲಿ ಜರುಗಿದ ಅಂತರರಾಷ್ಟ್ರೀಯ ಪ್ರಾಚ್ಯವಿದ್ಯಾ ಪರಿಷತ್ತಿನಲ್ಲಿ ಭಾರತ ಸರ್ಕಾರದ ಪ್ರತಿನಿಧಿ.

೧೯೭೩ : '*ಗೀತವೀತರಾಗ*' ಗ್ರಂಥಕ್ಕೆ ಸ್ವರ್ಣ ಪದಕ ದೆಹಲಿಯ ಶ್ರಮಣ ಭಜನ ಪ್ರಸಾರಕ ಮಂಡಲದಿಂದ.

೧೯೭೪ : ಬೆಲ್ಜಿಯಂನಲ್ಲಿ ನಡೆದ ಜಾಗತಿಕ ಧರ್ಮ ಮತ್ತು ಶಾಂತಿ ಸಮ್ಮೇಳನಕ್ಕೆ ಭಾರತ ಸರ್ಕಾರದ ಪ್ರತಿನಿಧಿ.

೧೯೭೫ : 'ನ್ಯಾಯಾವತಾರ' ಗ್ರಂಥಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಪಾರಿತೋಷಕ.

೧೯೭೫ : ಸಂಸ್ಕೃತ ರಾಷ್ಟ್ರೀಯ ಪಂಡಿತ ಪ್ರಶಸ್ತಿ- ರಾಷ್ಟ್ರಪತಿಗಳಿಂದ

೯ ಅಕ್ಟೋಬರ್ ೧೯೭೫ : ಕೊಲ್ಹಾಪುರದಲ್ಲಿ ಡಾ. ಆ.ನೇ. ಉಪಾಧ್ಯೆ ನಿಧನ.

* * * * *

## ಗ್ರಂಥಋಣ


1. *Dr. A.N. Upadhye,* 'Bibliography of the Works of Dr. A.N. Upadhye, Jivaraja Jaina Granthamala, Jaina Samskriti Samrakshaka Sangha, Sholapur, 1977.
2. Dr. A.N. Upadhye, '*Upadhye Papers*', Prasaranga, University of Mysore, Mysore, 1983.
3. Dr. B.K.Khadabadi, '*Dr. A.N. Upadhye his life and accomplishments*, Ahimsa Mandira Prakashana, New Delhi, 1999.
4. ಡಾ. ಎಂ.ಎ. ಜಯಚಂದ್ರ, '*ಡಾ. ಆ. ನೇ. ಉಪಾಧ್ಯೆ*', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1991,.
5. ಡಾ. ಬಿ.ಕೆ. ಖಡಬಡಿ, '*ಡಾ. ಆ.ನೇ. ಉಪಾಧ್ಯೆ : ಜೀವನ ಸಾಧನೆ*'.
6. ಡಾ. ಹಂಪ. ನಾಗರಾಜಯ್ಯ, '*ಡಾ. ಆ.ನೇ. ಉಪಾಧ್ಯೆ*', ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ, 1996.
7. ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರೀ, '*ಸಾಹಿತ್ಯ ಶಿಲ್ಪಿಗಳು*', ಕಲಾ ಸಾಹಿತ್ಯ ಪ್ರಕಾಶನ, ಬೆಂಗಳೂರು, 1985.

8. 'ಶ್ರೀ ಜಿನವಿಜಯ' ಮಾಸ ಪತ್ರಿಕೆಗಳು, ದಕ್ಷಿಣ ಭಾರತ ಜೈನ ಮಹಾಸಭೆ, ಬೆಳಗಾಂ.

9. *ಕರ್ನಾಟಕ ವಿಷಯ ವಿಶ್ವಕೋಶ*, ಕ.ಅ.ಸಂ. ಮೈ.ವಿ.ವಿ. 1979.

10. *ಕನ್ನಡ ವಿಶ್ವಕೋಶ*, ಸಂ.8, 9 ಮತ್ತು 10. ಕ. ಅ. ಸಂ. ಮೈ. ವಿ.ವಿ.

11. *ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ*, ಸಂ.೩ ಮೈ.ವಿ.ವಿ. ಮೈಸೂರು, ೧೯೭೬.

* * * * *

೧೯೩೩ರಲ್ಲಿ ಸ್ಥಾಪನೆಯಾದ ಅಧ್ಯಾಪಕರ ಸಂಘವು ಪ್ರಚಾರೋಪನ್ಯಾಸಗಳನ್ನು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಾರಂಭಿಸಿತು. ಈ ಉಪನ್ಯಾಸಗಳು ಪುಟ್ಟ ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿ ಜನಪ್ರಿಯವಾದುವು. ಈ ಪ್ರಯೋಗದ ಖ್ಯಾತಿ ಇಂಗ್ಲೆಂಡಿನವರೆಗೂ ಹಬ್ಬಿತು.

ಪ್ರಸಾರಾಂಗವು ಜ್ಞಾನಸಾಧನೆಗೆ, ಜ್ಞಾನಪ್ರಸಾರಕ್ಕೆ ಬೇಕಾಗುವ ಸಕಲ ಸಾಧನಗಳನ್ನು ಪ್ರಚಾರೋಪನ್ಯಾಸಗಳ ಮೂಲಕ, ಪ್ರಚಾರ ಪುಸ್ತಕಮಾಲೆಯ ಪ್ರಕಟಣೆಗಳ ಮೂಲಕ, ಇತರ ಉದ್ಗ್ರಂಥಗಳ ಪ್ರಕಟಣೆ ಇತ್ಯಾದಿಗಳ ಮೂಲಕ, ನಿರ್ವಹಿಸುತ್ತ ನಾಡಿನ ಅತ್ಯುತ್ತಮ ಜ್ಞಾನಪ್ರಸಾರ ಕೇಂದ್ರವಾಗಲೆಂದು ಹಾರೈಸುತ್ತೇನೆ.
(ನೂರನೆಯ ಪ್ರಚಾರ ಪುಸ್ತಕವಾದ 'ಪ್ರಸಾರಾಂಗ' ಮುನ್ನುಡಿಯಿಂದ)

– ರಾಷ್ಟ್ರಕವಿ ಕುವೆಂಪು